TEACHERS'
PUBLISHING
COMPANY,
UDIPI.

# ಬಾಲವಾಙ್ಮಯ

ಕೊರಡ್ಕಲ್ ಶ್ರೀನಿವಾಸರಾವ್

೧೯೩೭

ಮೂರಾಣೆ

ಉಪಾಧ್ಯಾಯರ
ಪ್ರಕಟನ ಸಮಿತಿ
ಉಡುಪಿ

TEACHERS' PUBLISHING COMPANY







## Advisory Board:

Roque Fernandes Esq., B. A., L. T.

*Headmaster, Board High School, UDIPI.*

B. N. Rao Esq., B. A. (Hons.)

*Editor, 'Financia Expertus', UDIPI.*

K. K. Shetty Esq.,

*Editor 'Navayuga' MANGALORE.*

K. R. Shenai Esq.,

*Editor, 'Balachandra', UDIPI.*

Kordcal Shrinivasa Rao Esq.,

*Teacher and Author, 'Ananda Granthamala' Series, UDIPI.*



Printed at the PRABHAKARA PRESS, UDIPI.

# ವಿಜ್ಞಾಪನೆ

ಇತ್ತೀಚೆಗೆ ಸುಮಾರು ಇಪ್ಪತ್ತು ವರುಷಗಳಿಂದ ಕನ್ನಡ ಭಾಷಾ ಸೇವೆಯಲ್ಲಿ ಉತ್ಸುಕತೆಯು ಹೆಚ್ಚುತ್ತ ಬಂದಿದೆ. ಪರಿಣಾಮವಾಗಿ ಹೊಸಹೊಸ ಪುಸ್ತಕಗಳೂ ಪತ್ರಿಕೆಗಳೂ ಪ್ರಕಟವಾಗುತ್ತಿವೆ. ಜನತೆಯ ಮನೋರಂಜನೆ, ಜ್ಞಾನಾಭಿವೃದಿ, ಬುದ್ಧಿ ಹೃದಯ ಸಂಸ್ಕಾರ,. ಇವಕ್ಕಾಗಿ ಬಗೆಬಗೆಯಲ್ಲಿ ಅವೆಲ್ಲ ದುಡಿಯುತ್ತಿವೆ. ಆದರೆ ಗ್ರಂಥಕರ್ತರ ಮತ್ತು ಪತ್ರಿಕಾಸಂಪಾದಕರ ಉತ್ಸಾಹಕ್ಕೆ ತಕ್ಕಷ್ಟು ಓದುಗರ ಪ್ರೋತ್ಸಾಹ ವಿದೆಯೆ? ಇಲ್ಲ! ಶಾಲೆಗಳು ಹೆಚ್ಚುತ್ತಾ ಬಂದಿವೆ; ಬರಹ ಬಲ್ಲವರ ಸಂಖ್ಯೆಯೂ ಏರಿದೆ. ಆದರೆ ಅದೇ ಪರಿಮಾಣದಲ್ಲಿ ಓದುಗರ ಸಮು ದಾಯವೂ ವೃದ್ಧಿಯಾಗಿದೆಯೆ? ಇಲ್ಲ. ಓದುಕಲಿತವರಲ್ಲಿ ಹೆಚ್ಚಿನವರು ಶಾಲೆಯನ್ನೂ ಓದುವುದನ್ನೂ ಒಟ್ಟಿಗೇ ಬಿಟ್ಟುಬಿಟ್ಟಂತಿದೆ. ವೈಯಕ್ತಿಕ ವಾಗಿ ಪುಸ್ತಕವನ್ನು ಕೊಂಡುಕೊಳ್ಳುವುದಾಗಲೀ ಪತ್ರಿಕೆಯನ್ನು ತರಿಸುವು ದಾಗಲೀ ಅವರಿಗೆ ಅವಶ್ಯವೆನಿಸುವುದೇ ಇಲ್ಲ. ಅಷ್ಟೇಕೆ? ಹಲವು ಗ್ರಾಮಗಳಲ್ಲಿ ಒಂದು ಪುಸ್ತಕಭಂಡಾರವಾಗಲೀ ವಾಚನಾಲಯವಾಗಲೀ ಇಲ್ಲ. ಆದರೆ ಅಲ್ಲಿ ಬರಹಬಲ್ಲವರು ನೂರುಗಟ್ಟಳೆಯಲ್ಲಿದ್ದಾರೆ. ಮೂಡಿದ ಹೊತ್ತು ಮುಳುಗಲಿಲ್ಲವಲ್ಲ ಎಂದು ಹಾಕಳಿಸುತ್ತ ಕಾಲಕಳೆಯುತ್ತಿದ್ದಾರೆ. ದುರ್ವ್ಯಸನಿಗಳಾಗುತ್ತಿದ್ದಾರೆ. ಅದರಲ್ಲಿ ಅರ್ಧಕ್ಕರ್ಧದಷ್ಟಾದರೂ ಓದುಗ ರಾಗಿದ್ದಿದ್ದರೆ ಉತ್ಸಾಹದಿಂದ ಹೊರಟಿದ್ದ ಅನೆಷ್ಟೋ ಪತ್ರಿಕೆಗಳು ವರುಷಾಂತ್ಯದೊಳಗೇ ಅಳಿಯುತ್ತಿರಲಿಲ್ಲ. ಪುಸ್ತಕಮುದ್ರಣದ ವೆಚ್ಚವೂ ಹುಟ್ಟಿ ಬಾರದೆ ಎಷ್ಟೋ ಸಮರ್ಥ ಗ್ರಂಥಕರ್ತರೂ ನಿರುತ್ಸಾಹರಾಗು ತ್ತಿದ್ದಿಲ್ಲ. ಈ ದುಃಸ್ಥಿತಿಯುಂಟಾಗಲು ಬಾಲ್ಯದಲ್ಲಿ ವಾಚನಾಭಿರುಚಿ ಯನ್ನು ನೆಲೆಗೊಳಿಸುವಂತಹ ಬಾಲವಾಙ್ಮಯವು ಮಕ್ಕಳಿಗೆ ದೊರಕ

ದಿದ್ದುದೇ ಪ್ರಾಮುಖ್ಯಕಾರಣ. ಆದುದರಿಂದ ಬಾಲವಾಙ್ಮಯದ ಆವಶ್ಯಕತೆ ಮತ್ತು ನಿರ್ಮಾಣದ ವಿಷಯವಾಗಿ ಈ ಲೇಖನವನ್ನು ಬರೆದುದಾಗಿದೆ. ಕರ್ಣಾಟಕ ಸಾಹಿತ್ಯ ಪರಿಷತ್ತೂ ಪತ್ರಿಕಾಕರ್ತರೂ ಗ್ರಂಥಕರ್ತರೂ ಉಪಾಧ್ಯಾಯ ಬಂಧುಗಳೂ ವಿದ್ಯಾಂಗದವರೂ ಬಾಲ ವಾಙ್ಮಯ ನಿರ್ಮಾಣದ ಕಡೆಗೆ ಹೆಚ್ಚಿನ ಲಕ್ಷ್ಯವಿಟ್ಟರೆ ಇಂದಿರುವ ಓದುಗರ ಬರಗಾಲವು ಮುಂದೆಯೂ ಇರಲಾರದೆಂದೂ ಓದುಬರಹ ಕಲಿಸುವುದರ ಸಾರ್ಥಕ್ಯವು ಜನಜೀವನದಲ್ಲಿ ಕಾಣಬಹುದೆಂದೂ ನಿಶ್ಚಯವಾಗಿ ಹೇಳ ಬಹುದು ಈ ತರಹದ ಪುಸ್ತಕಗಳನ್ನೇ ವಿಶೇಷವಾಗಿ ಪ್ರಕಟಿಸುವ ಧ್ಯೇಯ ದಿಂದ ಸ್ಥಾಪಿತವಾಗಿರುವ 'ಉಪಾಧ್ಯಾಯರ ಪ್ರಕಟನ ಸಮಿತಿ, ಉಡುಪಿ' ಇವರು ತಮ್ಮ ಗುರಿಯ ನಿರೂಪಣೆಯ ಉದ್ದೇಶದಿಂದಲೋ ಏನೋ ಈ ಲೇಖನವನ್ನು ತಮ್ಮ ಮೊದಲ ಪುಸ್ತಕವಾಗಿ ಪ್ರಕಟಿಸಲು ಕೈಕೊಂಡು ದಕ್ಕೆ ಆಭಾರಿಯಾಗಿರುವೆನು. ಈ ಮೊದಲು ಇದು 'ಬಾಲಚಂದ್ರ' ದಲ್ಲಿಯೂ ತುಸು ಚಿಕ್ಕದಾಗಿ 'ಸರಸ್ವತಿ' ಯಲ್ಲಿಯೂ ಪ್ರಕಟವಾಗಿತ್ತು. ಹಾಗೆ ಆಶ್ರಯವಿತ್ತ ಆ ಎರಡು ಪತ್ರಿಕೆಗಳಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

**ಕಾವ್ಯಕಲಾಮಂದಿರ,**
ಉಡುಪಿ,
ತಾ. ೧-೫-'೩೬.

**ಕೊರಡ್ಕಲ್ ಶ್ರೀನಿವಾಸರಾವ್.**

# ಬಾಲವಾಙ್ಮಯ

---

ಬಾಲವಾಙ್ಮಯವು ಕನ್ನಡದಲ್ಲಿ ಹೊಸದು. ಹೊಸದೆಂದ ಕೂಡಲೆ ಹಳೆಯುದರಲ್ಲಿ ಒಗ್ಗಿಹೋದ ಮನಸ್ಸು ಹುಬ್ಬುಗಂಟಿಕ್ಕುವುದು; ಉಪೇಕ್ಷೆಮಾಡುವುದು; ಆಕ್ಷೇಪ ಹೇಳುವುದು; ವಿಚಾರಮಾಡಲು ತಾಳ್ಮೆಯಿಲ್ಲ; ಆದರಿಸಲು ಪ್ರೀತಿಯಿಲ್ಲ; ಪ್ರಯೋಗಿಸಲು ವಿಶ್ವಾಸವಿಲ್ಲ. ಇದ್ದುದು ಇದ್ದ ಹಾಗೆಯೇ ಇರಬಾರದೇಕೆ? ಎನ್ನುವುದು ಆ ಮನಸ್ಸು. ಆದಕಾರಣ ಬಾಲ ವಾಙ್ಮಯವಿಲ್ಲದಿದ್ದುದರಿಂದ ಉಂಟಾದ ಹಾನಿಯೇನು? ಅದರಿಂದಾಗುವ ಗುಣವೇನು? ಅದನ್ನುಂಟುಮಾಡುವ ಬಗೆ ಹೇಗೆ? ಎಂಬುದರ ಕುರಿತು ವಿಚಾರವನ್ನೆಬ್ಬಿಸುವುದೇ ಈ ಲೇಖನದ ಉದ್ದೇಶ.

ಹಿಂದೊಂದು ಕಾಲವಿತ್ತು; ಆಗ ಮಗುವಿನ ಕೈಯಲ್ಲಿ ಕೊಡುವ ಪುಸ್ತಕವಾಗಲಿ ಹೇಳಿಕೊಡುವ ವಿಷಯವಾಗಲಿ ಅದಕ್ಕೆ ಮೆಚ್ಚಿಕೆಯನ್ನುಂಟುಮಾಡುತ್ತಿದ್ದಿಲ್ಲ. ಏಕೆಂದರೆ, ಅವೆಲ್ಲವೂ ಮಗುವಿನ ಪ್ರಪಂಚಕ್ಕೆ ಹೊರಗಿನವು; ಅದರ ಗ್ರಹಣ ಶಕ್ತಿಗೆ ಮೀರಿದುವು; ಅದರ ಅಭಿರುಚಿಗೆ ತಾಗದುವು. ಎಳೆಯ ವಯಸ್ಸು ಬಾಯಿಪಾಠಮಾಡಲಿಕ್ಕೆ ಅತ್ಯುತ್ತಮವಾದ ಕಾಲ ವೆಂಬ ಮಕ್ಕಳ ಮನಸ್ಸಿನ ಒಂದು ಲಕ್ಷಣವನ್ನು ಮಾತ್ರ ಆಗಿನವರು ತಿಳಿದಿದ್ದಂತೆ ತೋರುತ್ತದೆ. ಅದನ್ನಾದರಿಸಿಯೇ

ಆ ಕಾಲದ ಶಿಕ್ಷಣವು ಹೆಚ್ಚಿನ ಮಟ್ಟಿಗೆ ನಡೆಯುತ್ತ ಲಿತ್ತು. ಮಕ್ಕಳಿಗೆಮುಂದೆ ಪ್ರಯೋಜನಕಾರಿಯಾಗಬಹುದಾದ ಹಲವು ಗಹನ ವಿಷಯುಗಳನ್ನೊಳಗೊಂಡ ಧಾರ್ಮಿಕ- ನೈತಿಕ ಶ್ಲೋಕಗಳನ್ನೋ ಪದ್ಯಗಳನ್ನೋ ಗಿಳಿಪಾಠ ಮಾಡಿಸಿ ಬಿಡುತ್ತಿದ್ದರು. ಓದಿಸುವುದೂ ಕಲಿಸುವುದೂ ಅಂತಹ ವಿಷಯುಗಳನ್ನೇ. ಮಗುವಿಗೆ ಮಾತ್ರ ಅವು ಅರ್ಥವಾಗುತ್ತಿದ್ದಿಲ್ಲ, ರುಚಿಸುತ್ತಿದ್ದಿಲ್ಲ, ಅವನ್ನೋದುವುದರಲ್ಲಾಗಲೀ ಬಾಯಿಪಾಠ ಮಾಡುವುದರಲ್ಲಾಗಲೀ ಅದಕ್ಕೆ ಇಷ್ಟವಿದ್ದಿಲ್ಲ. ಆದರೆ ಹೆತ್ತವರೂ ಗುರುಗಳೂ ಐಗಳೂ ಉಪಾಧ್ಯಾಯರೂ ಮಕ್ಕಳ ಭಾವೀಹಿತಚಿಂತಕರೆಂದು ಅವನ್ನೆಲ್ಲ- ಮದ್ದು ಕುಡಿಸಿದಂತೆ, ಬೆತ್ತದ ಭೂತವನ್ನು ಕರೆಕರೆದು. ಹೆದರಿಸಿ, ಹೊಡೆದೂ- ಕಂಠಗತಮಾಡಿಸಿಯೇ ಬಿಡುತ್ತಿದ್ದರು. ಹೀಗಾಗಿ ಓದುವು ಮಗುವಿಗೆ ಕಹಿಮದ್ದಾಯಿತು; ಎಳೆಯ ನಾಲಿಗೆಗೆ ಹಿಡಿದುಹೋದ ಆ ಕಹಿಯ ಅನುಭವವು ಬೆಳೆದ ನಾಲಿಗೆಯನ್ನೂ ನಡುಗಿಸುವಂತೆ ಅಳಿಯದೆ ಉಳಿದೇ ಬಿಟ್ಟಿತು. ಹೆತ್ತವರೇನೋ ಸದುದ್ದೇಶದಿಂದ ಐಗಳ ಮಠಕ್ಕೋ ಶಾಲೆಗೋ ಮಕ್ಕಳನ್ನು ಗದರಿಸಿ ಬೆದರಿಸಿ ಹೊಡೆದು ಎಳೆದುಕೊಂಡು ಬಂದಾದರೂ ದೂಡಿಹೋಗುತ್ತಿದ್ದರು. ಉಪಾಧ್ಯಾಯರೂ ಮಗುವಿನ ಒಳ್ಳಿತಕ್ಕೆಂದೇ ಬೆತ್ತದ ಮೊನೆಯಿಂದಲಾದರೂ ಹಲವು ಮಹತ್ವದ ವಿಷಯುಗಳನ್ನು ಅದರ ತಲೆಯೊಳಗೆ ತುರುಕುತ್ತಿದ್ದರು.

ಆದರೆ ಮಗುವನ್ನು ಕುರಿತು "ನೀನು ಶಾಲೆಗೆ ಹೋಗುವುದೇಕೆ? ಕಲಿಯುವುದೇಕೆ?" ಎಂದು ಕೇಳಿದಾಗ, "ಹೋಗದಿದ್ದರೆ - ಕಲಿಯದಿದ್ದರೆ, ಅಪ್ಪ ಬೈತಾನೆ, ಅಮ್ಮ ತಿಂಡಿ

ಕೊಡೋಲ್ಲ, ಮಾಸ್ಟ್ರು ಹೊಡೀತಾರೆ" ಎಂಬ ಪ್ರತ್ಯುತ್ತರ ಬರುತ್ತಿದ್ದಿತಲ್ಲದೆ "ಶಾಲೆಯಲ್ಲಿ ಸುಖವಿದೆ, ಓದಿನಲ್ಲಿ ಸ್ವಾರಸ್ಯವಿದೆ" ಎಂಬ ಮಾತು ಹೊರಡುತ್ತಿದ್ದಿಲ್ಲ. ಏಕೆಂದರೆ ಅದು ಓದುವುದೂ ಕಲಿಯುವುದೂ ಅದರ ಲೋಕದಲ್ಲಿ ಕಾಣದುದು; ಅದರ ಅನುಭವಕ್ಕೆ ನಿಲುಕದುದು; ಅದರ ಬುದ್ಧಿಗೆ ತಿಳಿಯದುದು; ಅದಕ್ಕೆ ಆಹ್ಲಾದವನ್ನುಂಟುಮಾಡದುದು. ಆದುದರಿಂದ ಪ್ರಾಥಮಿಕ ಶಿಕ್ಷಣವನ್ನು ತೀರಿಸಿಕೊಂಡು ಮನೆಸೇರುವಷ್ಟರಲ್ಲಿ ವಾಚನದ ಕಡೆಗೆ ರೂಢಮೂಲವಾದ ಜುಗುಪ್ಸೆಯು ಅದರ ಹೃದಯದಲ್ಲಿ ನೆಲೆಯಾಗುತ್ತಿತ್ತು. ಮತ್ತದು ತೆನ್ನಾಲೀರಾಮನ ಬೆಕ್ಕು! ಆನಂದದಾಯಕವಾದ ಪುಸ್ತಕವನ್ನೇ ಕೈಯಲ್ಲಿ ಕೊಟ್ಟರೂ ಅದು ತೆರೆದು ನೋಡಲಾರದು. ಮುಂದೆ ಅದು ತನ್ನ ಜೀವಮಾನಕಾಲದಲ್ಲಿ ಓದುವುದೆಂದರೆ ಯಾರಾದರೊಬ್ಬನ ಕಾಗದ ಬಂದಾಗ- ಅದೂ ಬಹುಕಷ್ಟದಿಂದ; ಬರೆಯುವುದೆಂದರೆ ಕಾಗದ ಪತ್ರಗಳಿಗೆ ಸಹಿಹಾಕುವಾಗ- ಅದೂ ವಿಚಿತ್ರ ಬರೆಹದಲ್ಲಿ! ಹೀಗಾಗಿ ಜೀವನವು ಅದೆಷ್ಟು ಕಾಯಕ್ಲೇಶ ಮನಃಕ್ಲೇಶಗಳಿಂದ ತುಂಬಿದ್ದರೂ ಅದರಲ್ಲಿ ಆನಂದೋತ್ಸಾಹಗಳ ಕಿರಣವನ್ನು ಬೀರುವಂತಹ ಓದುಗಾರಿಕೆಯಿಂದ ಜನಸಾಮಾನ್ಯರು ವಂಚಿತರಾದರು. ಶಾಲೆಗಳು ಹೆಚ್ಚಿದುದು ನಿಜ. ಒಂದು ಗ್ರಾಮದೊಳಗೇ ನಾಲ್ಕಾರು ಶಾಲೆಗಳಾದುದೂ ಉಂಟು. ನಿರಕ್ಷರತೆಯು ದೂರವಾಯಿತೆಂದು ತೋರಿದುದೂ ಹೌದು. ಆದರೆ ಅದೆಲ್ಲವೂ ವಿದ್ಯಾಪ್ರಚಾರದಲ್ಲೊಂದು ಐಂದ್ರಜಾಲಿಕ ವಿದ್ಯೆ. ಕಣ್ಣುಕಟ್ಟಿನ ಕೈಮಾಟ. "ಮಕ್ಕಳು ಶಾಲೆಗೆ ಬಂದು ನಾಲ್ಕಾರು ವರ್ಷ ಓದಿ ಅಕ್ಷರಜ್ಞರೆನ್ನಿಸಿಕೊಂಡು ಹೋದರು; ಹೋಗು

ತ್ತಿದ್ದಾರೆ; ಅಕ್ಷರಜ್ಞರೆನ್ನಿಸಿಕೊಳ್ಳಲು ಹೆಚ್ಚುಹೆಚ್ಚಾಗಿ ಬರುತ್ತಿದ್ದಾರೆ; ಶಾಲಾಕಟ್ಟೋಣಗಳು ದೊಡ್ಡದಾಗುತ್ತಿವೆ; ಇವೆಲ್ಲಾ ಕಣ್ಣು ಕಟ್ಟೇ?" ಎಂದು ಕೇಳಬಹುದು. ಅವೆಲ್ಲ ನಿಜ. ಆದರೆ ನಾಲ್ಕಾರು ವರ್ಷ ಓದಿ ಅಕ್ಷರಜ್ಞರೆನ್ನಿಸಿಕೊಂಡು ಮನೆಸೇರಿದವರು ಏನು ಮಾಡುತ್ತಿದ್ದಾರೆಂಬುದನ್ನು ಪರಿಶೀಲಿಸಿ. ಅವರ ಮನೆಗಳನ್ನು ಹೊಕ್ಕು 'ಝಡತಿ' ಮಾಡಿ ನೋಡಿ,— ಅವರೋದುತ್ತಿರುವ ಒಂದೇ ಒಂದು ಪುಸ್ತಕವಾಗಲಿ, ಪತ್ರಿಕೆಯಾಗಲಿ ಅಲ್ಲಿ ಸಿಗುವುದೆ? ಶಾಲೆ ಬಿಟ್ಟಂದಿನಿಂದ ಅವರೆಷ್ಟು ಪುಸ್ತಕಗಳನ್ನು ಓದಿರುವರೆಂದು ಕೇಳಿ. ಈಗಾವ ಪುಸ್ತಕವನ್ನು ಓದುತ್ತಿರುವರೆಂದು ಪ್ರಶ್ನಿಸಿ. ಯಾವುದಾದರೊಂದು ವೃತ್ತಾಂತ ಪತ್ರಿಕೆಯು ಅವರ ಕೈಯನ್ನು ಸೋಂಕಿ ಎಷ್ಟುಕಾಲವಾಗಿರಬಹುದು? ಅವರು ಶಾಲೆ ಬಿಟ್ಟಂದಿನಿಂದ ಇಂದಿಗೆ ಲೋಕವು ಎಷ್ಟು ಮಾರ್ಪಾಟವನ್ನು ಹೊಂದಿದೆ? ಅವರಂದು ಕಲಿತ 'ಸಿವಿಕ್ಸ್' ಈಗೆಷ್ಟು ಸುಧಾರಿಸಿಗೊಂಡು ಮುಂದುವರಿದಿದೆ? ಎಂದು ಕೇಳಿ. ಆಗ ಗೊತ್ತಾಗುತ್ತದೆ ಅವರೆಲ್ಲರೂ ಪುನಃ ನಿರಕ್ಷರಿಗಳಾಗಿದ್ದಾರೆ ಎಂಬುದು. ಅಕ್ಷರಜ್ಞತೆಯ ಪ್ರಯೋಜನವನ್ನು ಅವರು ಹೊಂದಲಿಲ್ಲವೆಂದು ಸ್ಪಷ್ಟವಾಗುವುದು. ಕೊನೆಯ ಸಲ ಶಾಲೆಬಿಟ್ಟು ಮನೆಸೇರುವಾಗ 'ಪ್ಲೇಗಿ' ನಂತೆ ಅವರಿಗಂಟಿಕೊಂಡಿದ್ದ ಆ ಪುಸ್ತಕಗಳ ಸೋಂಕು ರೋಗದಿಂದ ಒಂದೊಮ್ಮೆಗೆ ಪಾರಾದೆವೆಂದು ಸಂತೋಷಗೊಂಡಿದ್ದಾರೆ ಅವರು! ಪುನಃ ಅದನ್ನು ಮನೆಯೊಳಗೆ ಬರಮಾಡಿಕೊಳ್ಳುವರೆ? ಓದಲಿಕ್ಕೆ ಬಿಡುವಿಲ್ಲವೆಂದಲ್ಲ—ಮೂಡಿದ ಹೊತ್ತು ಮುಳುಗಲಿಲ್ಲವಲ್ಲಾ ಎಂದು ಹಾಕಳಿಸುವವರು ಎಷ್ಟು! ಪುಸ್ತಕವನ್ನೋ

ಪತ್ರಿಕೆಯನ್ನೋ ಕೊಂಡುಕೊಳ್ಳಲಿಕ್ಕೆ ದುಡ್ಡಿಲ್ಲವೆಂದಲ್ಲ— ಅವರು ಜಾತ್ರೆಗೆ ಹೋದಾಗ, ಪೇಟೆಯಲ್ಲಿ ಸುತ್ತಿದಾಗ, ಕಾಫಿ ಹೊಟೆಲನ್ನು ಹೊಕ್ಕಾಗ, ಸಂತೆಯುತ್ಸವಗಳಲ್ಲಿ 'ಗನ್ ಬೋಟ್' ನ ಕಂದವ್ವಗಳಾದ ಬಗೆಬಗೆಯ 'ಲಕ್ಕೀಡಿಪ್' ಆಟದ ಮೇಜುಗಳ ಬಳಿ ನಿಂತಾಗ, ಅವರ ಕೈಬಿಟ್ಟು ಹೋಗುವ ದುಡ್ಡೆಷ್ಟು! ಹೀಗೆಯೇ ಮದುವೆ ಮುಂಜಿಗಳಲ್ಲಿ ವಿನೋದ ವಿಹಾರಗಳಲ್ಲಿ ವೇಷ-ಭೂಷಣ ಸುಖಲೋಲುಪ್ತತೆಗಳಲ್ಲಿ ಅವರವರ ಹಾಸಿಗೆ ಮೀರಿ ದುಂದುಗಾರಿಕೆಗೆ ಇಳಿಯುತ್ತಿರುವವ ರೆಷ್ಟು! ಅವರೆ ತಮ್ಮ ಇಡೀ ಜೀವಮಾನದಲ್ಲಿ ನಾಲ್ಕೆಂಟಾಣೆಯ ಎಂಟು ಹತ್ತು ಪುಸ್ತಕಗಳನ್ನಾದರೂ ಕೊಂಡುಕೊಂಡು ಓದಿ ದ್ದಾರೆಯೇ? ವಿಚಾರಿಸಿರಿ. ಇಲ್ಲ! ಶಾಲೆಯನ್ನು ಬಿಟ್ಟಂದಿ ನಿಂದ ಬುದ್ಧಿಯನ್ನು ಉಪವಾಸ ಹಾಕಿದವರೇ ಹೆಚ್ಚು! ಸಮಯ ವಿದ್ದಿಲ್ಲವೆಂದಲ್ಲ; ದುಡ್ಡಿದ್ದಿಲ್ಲವೆಂದಲ್ಲ— ಮನಸ್ಸಿದ್ದಿಲ್ಲ! ಪುಸ್ತಕ ಗಳು ಬೇಕೆಂದು, ತೋರಲಿಲ್ಲ; ಓದಬೇಕೆಂದು ಆಶೆಯಾಗ ಲಿಲ್ಲ; ಅಷ್ಟೆ! "ಪುಸ್ತಕ ಮಕ್ಕಳಿಗೆ! ಓದಬೇಕು ಬರೆಯ ಬೇಕು ಮಕ್ಕಳು! ನಮಗೇಕ ಆ ಗೊಡವೆ?" ಎಂಬ ಮಾನಸಿ ಕತೆ ಅವರದು.

ಐಗಳ ಸಾಲೆಯಿಂದ ಹೊರಬಿದ್ದವರಲ್ಲಾದರೂ ಒಂದು ತರದ ವಾಚನಾಭಿರುಚಿಯಿತ್ತು. ಅಲ್ಲಿ ಯಕ್ಷಗಾನಪ್ರಸಂಗ ಗಳ, ರಾಮಾಯಣ ಮಹಾಭಾರತಗಳ ಸ್ವಾರಸ್ಯಭಾಗಗಳನ್ನು ಓದಿಸುತ್ತಿದ್ದರು; ಹೇಳಿಸುತ್ತಿದ್ದರು. ಮಕ್ಕಳು ಪ್ರಸಂಗದ ಪಾತ್ರಗಳನ್ನು ವಹಿಸಿ ಮಾತಾಡುವಂತೆ ಮಾಡುತ್ತಿದ್ದುದರಿಂದ ಒಟ್ಟಿನ ಮೇಲೆ ಅದರ ಅರ್ಥವೂ ಸ್ವಾರಸ್ಯವೂ ತಿಳಿಯುತ್ತಿತ್ತು.

ಮೇಲಾಗಿ ರಾಗವಿತ್ತು, ತಾಳವಿತ್ತು, ಮದ್ದಳೆಯಿತ್ತು. ಇವು ಗಳಿಂದೆಲ್ಲ ಮಕ್ಕಳಿಗದರಲ್ಲಿ ಪ್ರೀತಿ ಹುಟ್ಟುತ್ತಿತ್ತು. ಹೀಗೆ ಐಗಳ ಸಾಲೆಯು ಅವರಿಗೆ ಅದೊಂದು ಬಗೆಯ ಓದಿನ ಹಾದಿಯು ನ್ನಾದರೂ ಹಾಕಿಕೊಡುತ್ತಿತ್ತು. ಆದುದರಿಂದ ಅವರು ಸಾಲೆ ಬಿಟ್ಟ ಮೇಲೆ ಆ ಹಾದಿಯಲ್ಲಿ ಸಾಗುತ್ತಿದ್ದರು. ಅಚ್ಚಿನ ಪುಸ್ತಕಗಳು ದುರ್ಲಭವಾಗಿದ್ದ ಕಾಲವದು; ಆದರೂ ಅವರು ಕೈಬರೆಹದಿಂದಲೇ ಪ್ರಸಂಗಗಳ ಪ್ರತಿಗಳನ್ನು ತೆಗೆದಿಟ್ಟು ಕೊಂಡು ವಿರಾಮಕಾಲದಲ್ಲೆಲ್ಲ ರಾಗಹಾಕುತ್ತಿದ್ದರು. ಬರೆಹ ಬಂದವರ ಮನೆಯಲ್ಲಿ ಪ್ರಸಂಗದ ಕೈಬರೆಪದ ಎಂಟು ಹತ್ತು ಪುಸ್ತಕಗಳಾದರೂ ಇರುತ್ತಿದ್ದುವು. ರಾಮಾಯಣ ಮಹಾ ಭಾರತಗಳ ಪುಸ್ತಕಗಳಿದ್ದವರು ಮಳೆಗಾಲದ ಬೈಗಿನ ಹೊತ್ತನ್ನು ಒಂದೆರಡು ಸಂಧಿಗಳನ್ನೋದಿ ಕಳೆಯುತ್ತಿದ್ದರು. ಇವುಗಳಿಂದಾಗಿ ಅದೊಂದು ರೀತಿಯ ವಾಚನಾಭಿರುಚಿಯೂ ಸಾಹಿತ್ಯಪ್ರೇಮವೂ ಆ ಜನರಲ್ಲಿ ನೆಲೆಯಾಗಿದ್ದುವು. ಆದರೆ ಆ ತಲೆಗಳು ಹೋದುವು. ಆ ಮೇಲಿನವರಿಗೆ ಆಗಿನದೂ ಬೇಡ, ಈಗಿನದೂ ಬೇಡ ಎಂದಾಗಿದೆ. 'ಅವುಗಳಲ್ಲೆಲ್ಲ ಏನು ರುಚಿಯಿದೆ!' ಎಂಬ ಉಪೇಕ್ಷೆ ಅವರಲ್ಲಿ. ರುಚಿಯಿದೆಯೋ! ಇಲ್ಲವೋ ಎಂದು ನೋಡುವ ಗೊಡವೆಗೇ ಹೋಗಲಿಲ್ಲ ಅವರು. ಏಕೆಂದರೆ ಚಿಕ್ಕಂದಿನಲ್ಲಿ ಅವರು ಓದಿ ರುಚಿನೋಡಿ ದ್ದರು; ಆಗ ಅದು ಕಹಿಕಹಿಯಾಗಿತ್ತು. ಖಂಡಿತವಾಗಿಯೂ ಅವರಿಗದು ರುಚಿಸಿದ್ದಿಲ್ಲ. ಆದರೆ ಆಗ ಅವರನ್ನು ಇಕ್ಕಡೆ ಯಲ್ಲಿ ಒತ್ತಿಹಿಡಿದು ಒತ್ತಾಯದಿಂದ ಕುಡಿಸುವವರಿದ್ದರು. ನಿರುಪಾಯರಾಗಿ ಅಳುಮೋರೆ ಮಾಡಿ ಹೇಗೋ ಹೇಗೋ

ಕುಡಿದಿದ್ದರು. ಈಗಲೂ ಪುಸ್ತಕವನ್ನು ನೋಡಿದಾಗಲೆಲ್ಲ ಆ ಅನುಭವದ ಚಿತ್ರವೇ ಅವರ ಕಣ್ಣಮುಂದೆ ಬಂದು ನಿಲ್ಲುವುದು. ಎಂದ ಮೇಲೆ ಅದನ್ನೀಗ ಮುಟ್ಟಿಯಾರೇ ಅವರು? ಮೊದಲೇ ಹೇಳಿದಂತೆ ಅವರದು ತೆನ್ನಾಲೀ ರಾಮನ ಬೆಕ್ಕಿನ ಪರಿಸ್ಥಿತಿ. ಚಿಕ್ಕಂದಿನಲ್ಲಿ ಕನ್ನಡವು ಅವರ ಪಾಲಿಗೆ 'ಇಳಿಸಿದುಷ್ಣದ ಹಾಲಿನಂದದಿ' ಆಗಿದ್ದಿಲ್ಲ. ಅವರಿಗೆ ಕುಡಿಸಿದುದು ಸುಡು ಸುಡು ಹಾಲು! ಅದನ್ನು ಕುಡಿದು ಬಾಯಿ ಸುಟ್ಟುಕೊಂಡಿದ್ದಾರೆ. ಅದುಕಾರಣ ಹಾಲೆಲ್ಲ ಸುಡು ಸುಡು ಎಂಬುದು ಅವರ ದೃಢವಾದ ನಂಬುಗೆ. ಆದುದರಿಂದ ಪುಸ್ತಕವನ್ನು ನೋಡಿದರೆ ಮುಖ ತಿರುಗಿಸುತ್ತಾರೆ ಅವರು. ತಪ್ಪು ಅವರದಲ್ಲ. ಉಪಾಧ್ಯಾಯರದೂ ಅಲ್ಲ. 'ಇಳಿಸಿದುಷ್ಣದ ಹಾಲೇ' ದೊರೆಯದಿದ್ದರೆ ಅವರೇನು ಮಾಡಿಯಾರು? ಮಕ್ಕಳಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸುವಂತಹ ಮಕ್ಕಳ ಪುಸ್ತಕಗಳೇ ಕನ್ನಡದಲ್ಲಿಲ್ಲದಿರುವಾಗ ಉಪಾಧ್ಯಾಯರಾದರೂ ಏನು ಮಾಡಬೇಕು? ಮಕ್ಕಳಿಗೆ ಕನ್ನಡ ಭಾಷೆಯ ಸವಿಯನ್ನುಣ್ಣಿಸಲು ಅವರಿಗಿದ್ದ ಸಾಧನಗಳಾದರೂ ಏನು? ಕೆಲವು ಪಠ್ಯಪುಸ್ತಕಗಳೆಂಬ ಆ ವಿಚಿತ್ರ 'ರೀಡರ್'ಗಳು. ಅವುಗಳಲ್ಲಿ ಸ್ವಾರಸ್ಯದ ಭಾಗಗಳೇ ವಿರಳ. ವಿಜ್ಞಾನ ಮತ್ತು ಭೌಗೋಲಿಕ ವಿಷಯಗಳೇ ಹೆಚ್ಚು. ಭಾಷೆಗೆ ಪ್ರಾಧಾನ್ಯವಿರದೆ ವಿಷಯಕ್ಕೇ ಪ್ರಾಮುಖ್ಯತೆ. ಆ ನೀರಸವಾದ ವಿಷಯಗಳ ಪ್ರತಿಪಾದನೆಯಿಂದ ಭಾಷೆಯ ಸೌಂದರ್ಯವು ಮರೆಯಾಯಿತು. ಮಕ್ಕಳ ತಲೆಗೆ ಮೀರುವಷ್ಟು ವಿಷಯ ವಿಸ್ತಾರಮಾಡಿದುದರಿಂದ ಮಕ್ಕಳಿಗೆ ವಿಷಯವನ್ನು ಗ್ರಹಿಸುವುದಕ್ಕಾಗಲೀ, ಭಾಷೆಗೆ ಮೆಚ್ಚುವುದಕ್ಕಾಗಲೀ ಆಗದೆ

ಹೋಯಿತು. ಪದ್ಯಗಳೋ ತೊಗಟೆಯಿಂದೊಡಗೂಡಿದ ಬಾದಾಮಿನಂತೆ. ಸವಿಯಾದ ತಿರುಳಿಗೆ ಹಲ್ಲು ಸೋಂಕುವ ಮೊದಲೇ ತೊಗಟೆಯ ಕಠಿಣತೆಯಿಂದ ಆ ಎಳೆಹಲ್ಲುಗಳು ನೋವುಗೊಂಡು ಉಗುಳುವಂತಾಗುತ್ತಿದ್ದುವು. ಆದುದರಿಂದ ಕನ್ನಡವು 'ಸುಲಿದ ಬಾಳೆಯ ಹಣ್ಣಿನಂದದಿ' ಎಂಬುದನ್ನು ಮಕ್ಕಳಿಗೆ ಮನಗಾಣಿಸಿಕೊಡಲು ಉಪಾಧ್ಯಾಯರಿಗೆ ಸಾಧ್ಯವಾಗಲಿಲ್ಲ. ಇದರ ಮೇಲೆ ಆ 'ಸಿಲೇಬಸ್'! ಉಪಾಧ್ಯಾಯರು ಉಸಿರುಗಟ್ಟಿಗೊಂಡು ಮಕ್ಕಳ ತಲೆಯೊಳಗೆ ತುರುಕಿಸುತ್ತ ಹೋದರೂ ವರ್ಷಾಂತ್ಯದಲ್ಲಿ ಪೂರೈಸಲಿಕ್ಕೆ ಕಷ್ಟಸಾಧ್ಯವಾಗುವಷ್ಟು ವಿಷಯಗಳು ತುಂಬಿ ತುಳುಕುತ್ತಿದ್ದುವು ಆ ಸಿಲೆಬಸ್ಸಿನಲ್ಲಿ! ಇನ್ನು ಆ ಭೂಗೋಳ, ಚರಿತ್ರೆ, ಸಾಯನ್ಸ್, ಇವುಗಳ ಪುಸ್ತಕಗಳನ್ನು ನೋಡಿದರೆ, ಆದಷ್ಟು ಕಡಿಮೆ ಪುಟಗಳಲ್ಲಿ ಸಾಧ್ಯವಿದ್ದಷ್ಟು ಹೆಚ್ಚು ವಿಷಯಗಳನ್ನು ತುರುಕಿಸಿದ ಪ್ರಯತ್ನವು ಒಡೆದು ಕಾಣುತ್ತಿವೆ ಅವುಗಳಲ್ಲಿ. ಮಕ್ಕಳಿಗೆ ಹೇಳುವ ರೀತಿಯಲ್ಲಾಗಲೀ, ಅವರು ಓದಿ ತಿಳಕೊಳ್ಳುವ ಮಾತಿನಲ್ಲಾಗಲೀ ಅವುಗಳಿಲ್ಲ. ಹೆಚ್ಚಿನ ಮಟ್ಟಿಗೆ ಅವೆಲ್ಲ ಉಪಾಧ್ಯಾಯರಿಗೆ ವಿಷಯಸಂಗ್ರಹದ (reference) ಪುಸ್ತಕಗಳಲ್ಲದೆ ಮಕ್ಕಳಿಗೆ ಓದುವ ಪುಸ್ತಕಗಳಲ್ಲ. ಇವುಗಳನ್ನು ಬಿಟ್ಟರೆ ಶಾಲೆಯಲ್ಲಿ ಬೇರೆ ಪುಸ್ತಕಗಳಿಲ್ಲ. ಮಕ್ಕಳಿಗೆ ಸ್ವಾರಸ್ಯವಾಗಿ ತೋರುವ ಪುಸ್ತಕಗಳೇ ಬರೆಯಲ್ಪಡದಿದ್ದಾಗ ಉಪಾಧ್ಯಾಯರಾದರೂ ಎಲ್ಲಿಂದ ತಂದುಕೊಡಬೇಕು? ಮಕ್ಕಳಲ್ಲಿ ವಾಚನಾಭಿರುಚಿಯನ್ನು ಹೇಗೆ ಹುಟ್ಟಿಸಬೇಕು? ಹೀಗಾಗಿ ಮಕ್ಕಳು ಓದುವಿನಲ್ಲಿ ಆನಂದವಿದೆ ಎಂಬುದನ್ನು ಮನಗಾಣ

ದೆಯೇ ಮನೆಹೊಕ್ಕರು. ಎಂತಹ ದುರ್ದಶೆಯಲ್ಲಿಯೂ ಮನಸ್ಸಿಗೆ ಸಮಾಧಾನ ಶಾಂತಿ ಸಂತೋಷಗಳನ್ನು ಕೊಡುವ ಓದಿನ ಆ ಅಮೃತಕಲಶವನ್ನೇ ಕಳೆದುಕೊಂಡರು. ಓದುವು ಇಹಪರ ಸುಖಸಾಧನ ಸಂಪತ್ತೆಂಬುದನ್ನು ಅರಿತು ಅನುಭವಿಸ ಲಾರದಾದರು. ಕನ್ನಡದಲ್ಲಿ ಬಾಲವಾಙ್ಮಯ ಪುಸ್ತಕಗಳಿಲ್ಲ ದಿದ್ದುದರಿಂದಲೇ ಹೀಗಾಯಿತೆನ್ನಬೇಕು.

ಏಕೆಂದರೆ, ಇಂಗ್ಲಿಷು ಕಲಿತವರು ಶಾಲೆ ಬಿಟ್ಟನಂತರವೂ ಓದುತ್ತಲಿದ್ದಾರೆ; ಬಿಡುವಿಲ್ಲದಿದ್ದರೂ ರಾತ್ರಿಕುಳಿತಾದರೂ ಓದುತ್ತಾರೆ. ಓದಿನಲ್ಲೊಂದು ಆನಂದವಿದೆಯೆಂಬುದನ್ನು ಅರಿತು ಅನುಭವಿಸುತ್ತಿದ್ದಾರೆ. ಇದಕ್ಕೇನು ಕಾರಣ? ಅವರ ವಿದ್ಯಾರ್ಥಿದಶೆಯಲ್ಲಿ ಆಯಾ ಕ್ಲಾಸಿನ ಅವರ ಭಾಷಾನುಭವಕ್ಕೆ ವಯೋಧರ್ಮಕ್ಕೆ ತಿಳಿವಳಿಕೆಗೆ ಸರಿಹೋಗುವಂತಹ ವಾಚನ ಪುಸ್ತಕಗಳು (library books) ಅವರ ಕೈಗೆ ಸಿಕ್ಕುತ್ತಲೇ ಇದ್ದುವು. ಬಗೆಬಗೆಯ ತರಾಂತರದ (graded) ಮಕ್ಕಳ ಪುಸ್ತಕಗಳನ್ನು ಅವರು ಓದುತ್ತಾ ಇದ್ದರು. ಅವುಗಳಿಂದಾಗಿ ಅವರಿಗೆ ವಾಚನದ ರುಚಿಯು ಹಿಡಿದು ಹೋಯಿತು. ಅದು ಕಾರಣ ಅವರು ಶಾಲೆಬಿಟ್ಟನಂತರವೂ ಓದು ಬಿಡಲಾರದ ವರಾಗಿದ್ದಾರೆ. ಕೆಲಸವೆಷ್ಟಿದ್ದರೂ ಅದರ ನಡುವೆ ಓದಲಿ ಕ್ಕೊಂದಿಷ್ಟು ಅವಕಾಶವನ್ನು ಕಲ್ಪಿಸಿಕೊಂಡು ಓದುತ್ತಾರೆ. ಇಂಗ್ಲಿಷಿನಲ್ಲಿರುವ ಮಕ್ಕಳ ಪುಸ್ತಕಭಂಡಾರ ಸಮೃದ್ಧಿಯಿಂದ ಅವರಿಗೆ ಆ ಅಭಿರುಚಿ ಹಿಡಿದು ಹೋಗಿದೆ.

ಕನ್ನಡದಲ್ಲಿಯೂ ಅಂತಹ ಮಕ್ಕಳ ಪುಸ್ತಕದ ಭಂಡಾರ ವಿದ್ದಿದ್ದರೆ ಮಕ್ಕಳು ಶಾಲೆಬಿಡುವುದರೊಳಗಾಗಿ ಓದುವ

ಚಟವನ್ನು ಕಟ್ಟಿಕೊಳ್ಳುತ್ತಿದ್ದರು. ಹಾಗಾಗಿದ್ದಲ್ಲಿ ಇಂದು ಅವರು ಓದುಗಾರಿಕೆಯ ಸುಖದಿಂದ ವಂಚಿತರಾಗುತ್ತಿದ್ದಿಲ್ಲ. ಪರಿಣಾಮವಾಗಿ ಸಾಹಿತ್ಯಾಭಿವೃದ್ಧಿಗೂ ಹಾನಿತಟ್ಟುತ್ತಿದ್ದಿಲ್ಲ. ಓದುಗರಿದ್ದರಲ್ಲವೇ ಬರೆಯುವವರಿಗೆ ಪ್ರೋತ್ಸಾಹ? ಬರೆದರಲ್ಲವೆ ಸಾಹಿತ್ಯಾಭಿವೃದ್ಧಿ? ಪತ್ರಿಕೆಗಳೂ ಪುಸ್ತಕಗಳೂ ವಾಚಕ ಸಮುದಾಯದ ಆಶ್ರಯವಿಲ್ಲದೆ ಕಂಗೆಟ್ಟಿವೆ ಎಂಬ ಕೂಗು ಇಂದು ಎಲ್ಲೆಲ್ಲಿಯೂ ಇದೆ. ಇದಕ್ಕೊಂದು ಪ್ರಾಮುಖ್ಯ ಕಾರಣವು ಹಿಂದೆ ಶಾಲೆಗಳಿಂದ ಹೊರಬಿದ್ದ ಮಕ್ಕಳು ವಾಚನಾಭಿರುಚಿಯನ್ನು ವೃದ್ಧಿಗೊಳಿಸಿಕೊಳ್ಳದೆ, ಇದ್ದುದನ್ನೂ ಕೆಡಿಸಿಕೊಂಡು, ಮನೆಗೆ ಸೇರಿದುದೇ; ಅವರು ಪುನಃ ನಿರಕ್ಷರತೆಯ ದಾರಿಹಿಡಿದಿರುವುದೇ. ಓದುವುದರಲ್ಲೆಂದೂ ಆನಂದವಿಲ್ಲೆಂದು ಅವರ ಆ ಎಳೆಯ ಹೃದಯದಲ್ಲಿ ಅಂಟಿಹೋಗಿದ್ದ ಅಚ್ಚಳಿಯದ ನಿಶ್ಚಲವಾದ ನಂಬುಗೆಯಿಂದಾಗಿ ಅವರಿಂದು ಓದುವುದಿಲ್ಲ. ಅಂದಿನ ಆ ಮಕ್ಕಳೇ ಇಂದಿನ ಜನಸಾಮಾನ್ಯರು ಇವರೆಂತೂ ಓದದಹಾಗಾಯಿತು, ಅದೇ ರೀತಿಯ ದುಃಸ್ಥಿತಿಯು ಇನ್ನೂ ಮುಂದುವರಿಯುತ್ತಾ ಹೋದರೆ ಮುಂದಿನ ಜನತೆಯೂ ಓದುವುದೆಂದರೆ ಅಷ್ಟಷ್ಟೆ! ಕನ್ನಡ ವಾಙ್ಮಯ ರಥವೂ ಮುಂದುವರಿಯುವುದೆಂದರೆ ಕೂರ್ಮಗತಿಯಲ್ಲಿಯೇ.

ಆದುದರಿಂದ ಎಂದಿನ ತನಕ ಶಾಲೆಯನ್ನು ಬಿಟ್ಟು ಮನೆ ಸೇರುವ ಮಕ್ಕಳಲ್ಲಿ ವಾಚನಾಭಿರುಚಿಯು ಸ್ಥಿರವಾಗಿ ನೆಲೆಯಾಗುವುದಿಲ್ಲವೋ ಅಂದಿನ ವರೆಗೆ ಸಾರ್ಥಕವಾದ ವಿದ್ಯಾಭ್ಯಾಸವಾಯಿತೆಂದು ಹೇಳಲು ಬರುವುದಿಲ್ಲ. ಶಾಲೆಯಲ್ಲಿ ಕಲಿತ ಓದುವು ಜ್ಞಾನಾರ್ಜನೆಗೆ ಸಾಧನವಲ್ಲದೆ ಅದಕ್ಕಲ್ಲೇ

ಅಂತ್ಯವಲ್ಲ. ಓದ್ಸುವು ನಿಂತಿತೆಂದರೆ ಜ್ಞಾನಾರ್ಜನೆಯೂ ನಿಂತಂತೆಯೇ. ಶಾಲೆಯಲ್ಲಿ ಹೇಳಿಕೊಟ್ಟುದು ಕಟ್ಟಿಕೊಟ್ಟ ಬುತ್ತಿಯಂತಾಗಿ ಕೊನೆಗೆ ಹಳಸಿ ಹಾಳಾಗಿಹೋಗುವುದು. ಆದುದರಿಂದ ಶಾಲೆಗಳಲ್ಲಿ ಮಕ್ಕಳ ತಲೆಯೊಳಗೆ ತುರುಕಿಸುವ ವಿವಿಧ ವಿಷಯಗಳ ಜ್ಞಾನವೆಂಬ ಆ ಕಟ್ಟಿಕೊಡುವ ಬುತ್ತಿಯು ಕಡಿಮೆಯಾದರೂ ಚಿಂತೆಯಿಲ್ಲ, ನಷ್ಟವಿಲ್ಲ; ಆದರೆ ಓದುವ ಲವಲವಿಕೆಯೆಂಬ ಜ್ಞಾನಾನಂದದ ಅಕ್ಷಯಪಾತ್ರೆಯನ್ನು ಮಕ್ಕಳ ಕೈಯಲ್ಲಿತ್ತು ಕಳುಹಿಸಿಕೊಡುವುದೇ ಮುಖ್ಯ. ವಾಚನಾಭಿರುಚಿಯೊಂದು ನೆಲೆಯಾಯಿತೆಂದರೆ ಜ್ಞಾನಾರ್ಜನೆಯು ಜೀವಮಾನವೆಲ್ಲ ನಡೆಯುತ್ತ ಹೋಗುವುದು. ಹಾಗಾಗುವುದೇ ಸಹಜ. ಪ್ರತಿಯೊಬ್ಬನೂ ಆಜನ್ಮಾಂತ ವಿದ್ಯಾರ್ಥಿಯೇ. ಪ್ರಪಂಚವೇ, ವಿಶ್ವಸಾಹಿತ್ಯವೇ ಆತನ ಶಾಲೆ, ಓದುವೇ ಜ್ಞಾನಾರ್ಜನೆಯ ಸಾಧನ. ಅದೇ ಅನುದಿನದ ಜೀವನದ ಹೋರಾಟದಿಂದ ದಣಿದ ಮನಸ್ಸಿನಲ್ಲಿ ಅನಂದೋಲ್ಲಾಸ ಧೈರ್ಯೋತ್ಸಾಹ ಶಾಂತಿ ಸಮಾಧಾನಗಳನ್ನು ಉತ್ಪಾದನೆಗೊಳಿಸಿ ಚೇತನ ಶಕ್ತಿಯನ್ನೀವ ಅಮೃತಬಿಂದು! ಆದುದರಿಂದ ಮಕ್ಕಳು ಮುಂದೆ ಜನ್ಮಾಂತ ಓದುಗರಾಗಿ ಬಾಳುವಂತೆ ಅವರಲ್ಲಿ ವಾಚನಾಭಿರುಚಿಯನ್ನು ನೆಲೆಗೊಳಿಸುವುದೇ ಶಿಕ್ಷಣದ ಪ್ರಾಮುಖ್ಯ ಲಕ್ಷಣ. ಅದೇ ವಿದ್ಯಾಭಿವೃದ್ಧಿಯನ್ನು ನಿಜವಾಗಿ ಅಳೆದು ತೋರಿಸುವ ಬಳ್ಳ.

ಎಂದಮೇಲೆ ಮಕ್ಕಳಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸುವುದು ಹೇಗೆ? ಅದಕ್ಕೇನಾಗಬೇಕು? ಎಂಬುದನ್ನು ವಿಚಾರ ಮಾಡೋಣ. ಮಕ್ಕಳು ತಿಂಡಿಗಾಗಿ ನುಗ್ಗುವಂತೆ, ಕಾಡುವಂತೆ ಕಾದಾಟಮಾಡುವಂತೆ, ತಿಂದು ನಲಿಯುವಂತೆ, ಪುಸ್ತಕಗಳಿ

ಗಾಗಿಯೂ ನುಗ್ಗಬೇಕು, ಕಾಡಬೇಕು, ಕಾದಾಟವಾಡಬೇಕು, ಓದಿ ನಲಿಯಬೇಕು. ಇದು ಸಾಧ್ಯವಾಗಬೇಕಾದರೆ ಪುಸ್ತಕಗಳು ಮಕ್ಕಳ ಮನಸ್ಸಿನ ತಿಂಡಿ ತಿನಸುಗಳಂತಿರಬೇಕು. ಕಹಿ ಮದ್ದಿನ ಹಾಗಿರಬಾರದು. ಆದರೆ ಹಿಂದೆಯೂ ಹೆಚ್ಚಿನವುಟ್ಟಿಗೆ ಈಗಲೂ ಅವೆಲ್ಲ ಕಹಿಮದ್ದಿನಂತೆಯೇ ಇವೆ. ಮುಂದಾದರೂ ಹಾಗಾಗದಂತೆ ಎಚ್ಚರಗೊಳ್ಳ ಬೇಡವೆ? ಅದಕ್ಕಾಗಿ ಮಕ್ಕಳ ಮನಸ್ಸಿಗೊಪ್ಪುವ ಒಂದು ಪುಸ್ತಕ ಪ್ರಪಂಚವು ನಿರ್ಮಾಣವಾಗ ಬೇಕಾಗಿದೆ. ಯಾವ ಪುಸ್ತಕ ಪ್ರಪಂಚದಲ್ಲಿ ಮಕ್ಕಳಲೋಕವೇ ಪ್ರತಿಬಿಂಬಿತವಾಗುವುದೋ, ಯಾವ ಪುಸ್ತಕಗಳಲ್ಲಿ ಮಕ್ಕಳ ಅನುಭವಕ್ಕೆ, ಅಭಿರುಚಿಗೆ, ಹೃದಯಕ್ಕೆ, ತಿಳಿವಿಗೆ ಮೀರದ ವಿಷಯಗಳು ಸುಲಭವಾಗಿ, ಸರಳವಾಗಿ, ಸ್ವಾರಸ್ಯವಾಗಿ ಬರೆಯಲ್ಪಟ್ಟಿರುವವೋ ಆ ಪುಸ್ತಕ ಸಮುದಾಯಕ್ಕೆ 'ಬಾಲ ವಾಙ್ಮಯ' ಎಂದು ಹೆಸರು. ಇದರ ಕಾವ್ಯಭಾಗಕ್ಕೆ 'ಬಾಲ ಸಾಹಿತ್ಯ' ಎನ್ನುವರು. ಇಂತಹ ಬಾಲವಾಙ್ಮಯದ ಪುಸ್ತಕಗಳು ಮಕ್ಕಳಿಗೆ ಧಾರಾಳವಾಗಿ ದೊರೆಯುತ್ತಿರಬೇಕು. ಅವು ತಮ್ಮ ಹೊರಗಿನ ಒಳಗಿನ ಸೌಂದರ್ಯ ಸ್ವಾರಸ್ಯಗಳಿಂದ ಮಕ್ಕಳ ನ್ನಾಕರ್ಷಿಸಿ, ಓದುವ ಆಶೆಯನ್ನು ಹುಟ್ಟಿಸಿ, ತಿಳಿಯುವ ಕುತೂಹಲವನ್ನೆಬ್ಬಿಸಿ, ಜೇನುನೊಣಗಳು ಹೂವುಗಳನ್ನು ಮುತ್ತುವಂತೆ, ತಿರುತಿರುಗಿ ತಮ್ಮ ಬಳಿಗೆ ಬರುವ ಹಾಗೆ ಮಾಡಬೇಕು. ಅದರಿಂದಾಗಿ ಅವರಲ್ಲಿ ಓದುವ ಚಟವು ಹಿಡಿದು ಬಿಡುತ್ತೆ. ಆಮೇಲೆ ಅವರಿಗೆ ಅನುದಿನದ ಊಟವು ಹೇಗೋ ಓದುವೂ ಹಾಗೆಯೇ ಬಿಡಲಾಗದ ಆವಶ್ಯಕತೆಯೆಂದೆನ್ನಿಸುವುದು. ಅವರು ಜನ್ಮಾಂತ ಓದುಗರಾಗಿ ಜ್ಞಾನಿಗಳಾಗಿ ಸುಖಿಗಳಾಗಿ ಬಾಳುವರು.

ಪಾಶ್ಚಾತ್ಯ ದೇಶಗಳಲ್ಲಿ ಇಂತಹ ಬಾಲವಾಙ್ಮಯಕ್ಕೆ ವಿಶೇಷ ಪ್ರಾಧಾನ್ಯವಿದೆ. ವ್ಯಕ್ತಿಯ ಏಳಿಗೆಗೂ ಭಾಷೆಯ ಮೇಲ್ಮೆಗೂ ದೇಶದ ಉನ್ನತಿಗೂ ಫಲಕಾರಿಯಾಗುವಂತೆ ಮಕ್ಕಳಲ್ಲಿ ಬಿತ್ತಬೇಕಾದ ಬೀಜಗಳೆಂದರೆ ಬಾಲವಾಙ್ಮಯದ ಪುಸ್ತಕಗಳು. ಅವುಗಳನ್ನು ಬಿತ್ತುವ ಕ್ಷೇತ್ರವೇ ಎಳೆಯ ಮನಸ್ಸು. ಅಲ್ಲಿ ಅದು ಮೊಳೆತು ಬೇರೂರಿ ಪ್ರಬಲವಾಗಿ ಬೆಳೆಯತೊಡಗಿತೆಂದರೆ ಮತ್ತಾರೂ ಹೆಚ್ಚಿನ ಶ್ರಮ ವಹಿಸಬೇಕಾಗಿಲ್ಲ. ಅದು ತಾನಾಗಿ ಬೆಳೆಯುತ್ತ ಬೆಳೆಯುತ್ತ ಉತ್ತಮ ಫಲಗಳನ್ನು ಕೊಡುವುದು. ಈ ತತ್ತ್ವವನ್ನು ಪಡುವಣ ದೇಶದವರು ಚೆನ್ನಾಗಿ ಮನಗಂಡಿರುವರು. ಅಲ್ಲಿ ಮಕ್ಕಳು ತಿನ್ನುವ ತಿಂಡಿಯನ್ನೂ ಉಣ್ಣುವ ಊಟವನ್ನೂ ಬಿಟ್ಟು ಅತ್ಯಾತುರದಿಂದ ಓದುವ ಪುಸ್ತಕಗಳು ಅಸಂಖ್ಯಾತವಿವೆ. ನಮ್ಮಲ್ಲಿಯಾದರೋ ತಿಂಡಿ ಕೊಟ್ಟರೂ ಔತಣ ಹಾಕಿದರೂ ಅವರು ಓದದ ಕೆಲವು ಪುಸ್ತಕಗಳು ಶಾಲೆಗಳಲ್ಲಿ ಕಾಣುತ್ತಿವೆ. ಅಲ್ಲಿ ಓದಲಾರದ ಮೂರು ನಾಲ್ಕು ವರುಷದ ಮಗುವು ನೋಡಿಯಾದರೂ ಪುಸ್ತಕದ ಕಡೆಗೆ ಅದರ ಒಲವು ತಿರುಗಲೆಂದು ಚಿತ್ರಪುಸ್ತಕಗಳು ಸಾವಿರಾರು ಇವೆ. ಐದು ವರುಷದಿಂದ ಹದಿನೈದು ವರುಷದ ಪ್ರಾಯದ ವರೆಗಿನ ಬಾಲಕ ಬಾಲಕಿಯರಿಗೆ ಆಯಾ ವಯೋಧರ್ಮದ ಅಭಿರುಚಿಗೆ ಅನುಸಾರವಾಗಿ ಅರಿವಿನ ಮಟ್ಟಕ್ಕೆ ತಕ್ಕುದಾಗಿ ವಿಷಯಗಳನ್ನು ಆಯ್ದುಕೊಂಡು ಸರಳವಾಗಿ ಸ್ವಾರಸ್ಯವಾಗಿ ಬರೆದ ಪುಸ್ತಕಗಳು ಲಕ್ಷಾಂತರವಿವೆ. ನೋಡಿದ ಮಾತ್ರಕ್ಕೇ ಓದೋಣವೆಂದು ಮಕ್ಕಳು ಕೈನೀಡಬೇಕು,— ಅಷ್ಟು ಚಂದ ಹೊರಗೂ ಒಳಗೂ! ಮೆಕ್ಮಿಲನ್, ಲೋಂಗ್‌ಮೇನ್,

ಆರ್ನೋಲ್ಡ್, ಬ್ಲೇಕ್ಕೀ ಮುಂತಾದ ಪ್ರತಿಯೊಂದು ಪ್ರಾಮುಖ್ಯ ಪುಸ್ತಕ ಪ್ರಕಟಣಾಸಂಘಗಳೂ, ಹಲವು ತರದ ಬಾಲಪುಸ್ತಕ ಮಾಲೆಯುಗಳನ್ನು ಹೊರಡಿಸಿವೆ. ಪ್ರತಿಯೊಂದು ಮಾಲೆ ಯಲ್ಲಿಯೂ ನೂರಾರು ಪುಸ್ತಕಗಳಿವೆ. ಮಕ್ಕಳು ಅನ್ನ-ನೀರು ಬಿಟ್ಟು ಓದಬೇಕು ಅವನ್ನು! ಅಷ್ಟು ವೈವಿಧ್ಯ, ಅಷ್ಟು ಸ್ವಾರಸ್ಯ ಅವುಗಳಲ್ಲೆಲ್ಲ!

ಹೀಗೆ ಅಲ್ಲಿಯವರು ಬಾಲವಾಙ್ಮಯದ ಬಲವಾದ ಬುನಾದಿ ಯನ್ನು ಹಾಕಿಕೊಂಡೇ ಭಾಷೋನ್ನತಿಯ, ಜ್ಞಾನೋನ್ನತಿಯ, ದೇಶೋನ್ನತಿಯ ಮಹಾಪ್ರಾಸಾದಗಳನ್ನು ಯಶಸ್ವಿಯಾಗಿ ಕಟ್ಟಿ ರುತ್ತಾರೆ, ಕಟ್ಟುತ್ತಲಿದ್ದಾರೆ. ನಾವೋ ಬುನಾದಿಯು ಬೇಕೆಂಬು ದನ್ನು ಅರಿತೇ ಇದ್ದಿಲ್ಲ. ಮರಳಿನ ಮೇಲೆ ಕಟ್ಟಡವನ್ನು ಕಟ್ಟುತ್ತ 'ಅಯ್ಯೋ, ನಿಲ್ಲುವುದಿಲ್ಲವಲ್ಲ!' ಎಂದು ಮಾತ್ರ ಬೆರಗಾಗುತ್ತಲಿದ್ದೆವು. ತಳಗಟ್ಟು ಹಾಕದೆ ಇದ್ದುದೇ ನಮ್ಮ ದೋಷವೆಂಬ ಜ್ಞಾನೋದಯವು ನಮ್ಮಲ್ಲಿ ಇತ್ತೀಚೆಗೆ ಉಂಟಾಗಿ ಅದರ ಕಡೆಗೆ ನಮ್ಮ ಲಕ್ಷ್ಯವು ಈಗ ತಾನೆ ತಿರುಗಿದೆಯಷ್ಟೆ!

ಅದರಿಂದಾಗಿ ಕನ್ನಡದಲ್ಲಿ ಬಾಲಸಾಹಿತ್ಯದ ಪುಸ್ತಕ ಗಳು ಅಲ್ಲೊಂದು ಇಲ್ಲೊಂದು ತಲೆದೋರತೊಡಗಿವೆ. ಕೆಲವು ಪತ್ರಿಕೆಗಳೂ 'ಮಕ್ಕಳ ಲೋಕ' 'ಮಕ್ಕಳ ಪುಟ' 'ಕಿರಿಯರ ಖಜಾನೆ' ಎಂಬಿತ್ಯಾದಿ ಹೆಸರುಗಳಿಂದ ಒಂದೆರಡು ಪುಟಗಳನ್ನು ಮಕ್ಕಳ ಓದಿಗೆಂದು ಮೀಸಲಾಗಿ ಇಡತೊಡಗಿರುವವು. ಮಕ್ಕಳಿಗಾಗಿಯೇ ಹೊರಡುವ ಪತ್ರಿಕೆಗಳೂ ಒಂದೆರಡಿವೆ. ಆದರೆ ಇವೆಲ್ಲ 'ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆ!' ಏನೂ ಸಾಲದು. ಆದುದರಿಂದ ಬರೆಹಗಾರರೆಲ್ಲರೂ ಈ ಬಾಲ

ವಾಙ್ಮಯ ನಿರ್ಮಾಣದ ಕಡೆಗೆ ದೃಷ್ಟಿ ತಿರುಗಿಸಬೇಕಾಗಿದೆ. ಹಿರಿಯರಿಗಾಗಿ ಪುಸ್ತಕ ಬರೆಯುವುದನ್ನು ಸ್ವಲ್ಪ ಸಮಯ ಬಿಟ್ಟರೂ ನಷ್ಟವಿಲ್ಲ. ಬರಿದಾಗಿರುವ ಬಾಲವಾಙ್ಮಯ ಭಂಡಾರ ವನ್ನು ಮೊದಲಾಗಿ ತುಂಬಿಸಬೇಕು. ಮಕ್ಕಳ ಪುಸ್ತಕವನ್ನು ಬರೆವುದು ಗೌರವಕ್ಕೆ ಕುಂದೆಂದು ಯಾವ ಗ್ರಂಥಕರ್ತೃವೂ ತಿಳಿಯಬಾರದು. ಹಿರಿಯರ ಸಾಹಿತ್ಯ ಬರೆಯುವುದ ಕ್ಕಿಂತ ಕಿರಿಯರದನ್ನು ಯಶಸ್ವಿಯಾಗಿ ಬರೆದವನೇ ಮೇಲು. ಏಕೆಂದರೆ ತನ್ನ ಭಾವಋುಷಿತ್ವ, ರಸಋುಷಿತ್ವಗಳ ಹುಚ್ಚನ್ನು ಬಿಟ್ಟುಕೊಟ್ಟು, ಮಗುವಿನ ಮಟ್ಟಕ್ಕಿಳಿದು, ಮಗುವಿನ ದೃಷ್ಟಿ ಯಿಂದ ನೋಡಿ, ಮಗುವು ಓದಿಯಾಡಿ ಕುಣಿಯುವಂತೆ ಬರೆವುದೆಂದರೆ ಸಾಮಾನ್ಯವೆ? ಈ ಕಾರ್ಯಕ್ಕೆ ಬೇಕಾದುದು ಸಾಹಿತ್ಯಪಾಂಡಿತ್ಯವಲ್ಲ. ಪ್ರಯೋಗದಿಂದ ಮನಗಂಡ ಮಕ್ಕಳ ಮನೋಧರ್ಮದ ಪಾಂಡಿತ್ಯ. ಮಕ್ಕಳ ದೃಷ್ಟಿಯಿಂದ ನೋಡುವ ಸಾಮರ್ಥ್ಯ. ನೋಡಿದುದನ್ನು ಸಹಜವಾಗಿ ಸರಳವಾಗಿ ಸ್ವಾರಸ್ಯವಾಗಿ ಮಕ್ಕಳಿಗೆ ಹೇಳುವ ರೀತಿಯು ಲೇಖನ ಕೌಶಲ್ಯ. ಈ ಪ್ರಯತ್ನದಲ್ಲಿ ಕೆಲವು ಹಿರಿಯ ಸಾಹಿತಿಗಳೆಂದೆನ್ನಿಸಿ ಕೊಂಡವರು ಸೋಲಬಹುದು. ಹಲವು ಸಾಮಾನ್ಯ ಉಪಾ ಧ್ಯಾಯರು ಗೆಲ್ಲಬಹುದು. ಅಂತೂ ಎಲ್ಲರೂ ಕೈಗೊಟ್ಟು ತಮ್ಮ ಸಾಮರ್ಥ್ಯವನ್ನು ಅಳೆಯುವ ಸಂದರ್ಭವಿದು. ಎಲ್ಲರೂ ತಮ್ಮ ತಮ್ಮ ಶಕ್ತ್ಯಾನುಸಾರ ಬಾಲಸಾಹಿತ್ಯ ಸರಸ್ವತಿಗೆ ಕಾಣಿಕೆಯನ್ನೊಪ್ಪಿಸುವ ಕಾಲವಿದು.

ಆದುದರಿಂದ ಬಾಲವಾಙ್ಮಯದ ನಿರ್ಮಾಣದ ಕಡೆಗೆ ಬರೆಹಗಾರರೆಲ್ಲರೂ ಗಮನವೀಯಬೇಕಾಗಿರುವ ಈ ಕಾಲದಲ್ಲಿ

ಅದರ ವಿಷಯವಾಗಿ ಯೋಚಿಸಿದಷ್ಟು ವಿಚಾರಮಾಡಿದಷ್ಟು ಚರ್ಚಿಸಿದಷ್ಟು ಅಭಿಪ್ರಾಯ ವಿನಿಮಯಮಾಡಿದಷ್ಟು ಅದರ ಸ್ವರೂಪನಿರೂಪಣೆಯ ನಿಷ್ಕರ್ಷೆಗೆ ವಿಶೇಷ ಸಹಕಾರಿಯಾಗುವುದು. ಈ ದೃಷ್ಟಿಯಿಂದಲೇ ಕೆಳಗೆ ಕೆಲವು ಸೂಚನೆಗಳನ್ನು ಕೊಟ್ಟುದಾಗಿದೆ. ಮುಖ್ಯವಾಗಿ ಬಾಲವಾಙ್ಮಯವು ಪದ್ಯವಿರಲಿ. ಗದ್ಯವಿರಲಿ, ಅದು ಹೇಗಿರಬೇಕೆಂದು ಅದರ ಸ್ಥೂಲ ರೇಖೆಗಳನ್ನು ಹಾಕುವವರೂ ಅದನ್ನು ತುಂಬಿಸುವವರೂ ಮಗುವಿನ ಸ್ವಭಾವವನ್ನು ಚೆನ್ನಾಗಿ ಪರಿಶೀಲಿಸಿ ಅದನ್ನು ಲಕ್ಷ್ಯದಲ್ಲಿಟ್ಟುಕೊಂಡು ಸಾಧ್ಯವಿದ್ದಷ್ಟು ತಾವೇ ಮಗುವಾಗಿ ಮಗುವಿನ ದೃಷ್ಟಿಯಿಂದ ವಿಷಯಗಳನ್ನು ನೋಡುತ್ತ ಆ ಮನೋವೃತ್ತಿಗೆ ತೃಪ್ತಿಕರವಾಗುವಂತೆ ಬರೆದರೆ ಮಾತ್ರ ಅದು ಪ್ರಯೋಜನಕಾರಿಯಾದ ಬಾಲವಾಙ್ಮಯವಾಗುವುದು.

ಮಕ್ಕಳ ವಾಙ್ಮಯವನ್ನು ವಯೋಧರ್ಮಕ್ಕನುಸರಿಸಿ ಸ್ಥೂಲವಾಗಿ ನಾಲ್ಕು ವಿಭಾಗ ಮಾಡಿಕೊಳ್ಳಬಹುದು. ಮೊದಲನೆಯದು ೫ ವರುಷದಿಂದ ೭ ವರುಷದ ವರೆಗಿನ ಮಕ್ಕಳಿಗೆ. ಎರಡನೆಯದು ೮ರಿಂದ ೧೦ರ ವರೆಗಿನವರಿಗೆ. ಮೂರನೆಯದು ೧೧ರಿಂದ ೧೩ರ ವರೆಗಿನವರಿಗೆ. ನಾಲ್ಕನೇಯದು ೧೪ರಿಂದ ೧೬ ವರುಷಗಳ ವರೆಗಿನವರಿಗೆ. ಪ್ರತಿಯೊಂದು ಭಾಗದ ಸಾಹಿತ್ಯವೂ ಆಯಾ ವರುಷದ ಬಾಲಕರ ಅನುಭವಕ್ಕೆ ಗ್ರಹಣಶಕ್ತಿಗೆ ಅಭಿರುಚಿಗೆ ಮನೋರಂಜನೆಗೆ ಸರಿಹೋಗುವಂತಹ ಲಕ್ಷಣಗಳಿಂದ ಕೂಡಿರಬೇಕು. ಹಿಂದಿನ ಭಾಗವು ಮಗುವನ್ನು ಮುಂದಿನದಕ್ಕೇರಿಸುವ ಕುತೂಹಲ ದೃಷ್ಟಿಯ ಮೆಟ್ಟಲಾಗಿದ್ದು, ಅದರ ಪ್ರಪಂಚವು ವಿಸ್ತಾರವಾದಂತೆ

ವಿಷಯಗಳನ್ನು ಆಯ್ದುಕೊಳ್ಳುವುದರಲ್ಲಿಯೂ ಹೇಳುವ ರೀತಿಯಲ್ಲಿಯೂ ಸೌಪಾನಿಕವಾಗಿ ಮಾರ್ಪಾಟಗಳನ್ನು ಮಾಡುತ್ತ, ಮಾಡುತ್ತ ಮುಂದುವರಿಯಬೇಕು. ಒಂದೇ ವಿಷಯವು ನಾಲ್ಕು ಭಾಗಗಳನ್ನೂ ವ್ಯಾಪಿಸುವಷ್ಟು ದೊಡ್ಡದಾಗಿದ್ದರೆ ಏಕ ಕೇಂದ್ರೀಯ ಕ್ರಮ(concentric system)ವನ್ನು ಅನುಸರಿಸಿ ಪ್ರಾಮುಖ್ಯಾಂಶಗಳ ಸ್ಥೂಲರೇಖೆಗಳನ್ನು ಮೊದಮೊದಲ ಭಾಗಗಳಲ್ಲಿ ಸಂಕ್ಷೇಪವಾಗಿ ತೋರಿಸಿ ಮುಂದುವರಿದಂತೆ ಕೂಲಂಕಷ ವಿಚಾರಗಳನ್ನು ಹೆಚ್ಚು ಹೆಚ್ಚಾಗಿ ಸೇರಿಸುತ್ತ ವಿಷಯ ವ್ಯಾಪಕತ್ವವನ್ನು ತೋರಿಸಬಹುದು.

ಆದುದರಿಂದ ಮೊದಲನೆಯ ಭಾಗದ ಪುಸ್ತಕಗಳು ಚಿತ್ರಮಯವಾಗಿಯೂ ಶಬ್ದಗಳು ದೊಡ್ಡದೊಡ್ಡ ಅಕ್ಷರಗಳಿಂದ ಬರೆಯಲ್ಪಟ್ಟು ದೂರದೂರವಾಗಿಯೂ ಇರುವುದು ಅಗತ್ಯ. ಬಣ್ಣದ ಚಿತ್ರವು ಹೊರವುಟ್ಟೆಯಲ್ಲಿಯೂ ಒಳಗೆ ಅಲ್ಲಲ್ಲಿಯೂ ಇರುವುದು ಉತ್ತಮ. ಮತ್ತುಳಿದ ಚಿತ್ರಗಳು ಸಾಮಾನ್ಯವಾದವುಗಳಾದರೂ ಆಗಬಹುದು. ಪದ್ಯಗಳಾಗಿದ್ದಲ್ಲಿ ಶಬ್ದಗಳು ಸಂಧಿಸಮಾಸಗಳಿಂದೊಡಗೂಡಿ ಉದ್ದುದ್ದವಾಗಿರದೆ ಚಿಕ್ಕವುಗಳಾಗಿದ್ದು ತಾಳಗತಿಗೆ ಇಡೀ ಶಬ್ದಗಳೇ (ಸಾಧ್ಯವಿಲ್ಲದಿದ್ದಲ್ಲಿ ಸಹಜವಾಗಿ ವಿಂಗಡಿಸಿ ಸುಲಭವಾಗಿ ಹೇಳಲಾಗುವ ಶಬ್ದಭಾಗಗಳೇ) ಸಿಕ್ಕುವಂತಿರಬೇಕು. ಕಿವಿಗಿಂಪಾಗುವ ಪ್ರಾಸದ ರವವು ತಿರುತಿರುಗಿ ಕೇಳುತ್ತಿರಬೇಕು; ವಿಷಯಗಳು ಮಗುವಿನ ಅನುಭವ ಮತ್ತು ಕಲ್ಪನೆಗೆ ಎಟಕುವಂತಹವುಗಳಾಗಿದ್ದು ಅವನ್ನು ಅವರ ಕಣ್ಣೆದುರಿಗೆ ತಂದುಕಟ್ಟುವಂತೆ ಸಹಜವಾದ ಮನೆಮಾತಿನಿಂದ ಚಿತ್ರಿಸಬೇಕು. ಗದ್ಯಕತೆಗಳು ಎರಡು ತೆರನಾಗಿರ

ಬಹುದು. ಆ ವಯಸ್ಸಿನ ಮಕ್ಕಳ ಪ್ರಪಂಚಕ್ಕೆ ಸಂಬಂಧಪಟ್ಟ ಚಿಕ್ಕಕತೆಗಳ ಜಾತಿಯುವು ಒಂದು — ಇದರಲ್ಲಿ ಮಗುವಿನ ಅನುದಿನದ ಆಟಗಳು ತಿಂಡಿತಿನಸುಗಳು ಬಂಧುಗಳು ಹಬ್ಬಗಳು ಪರಿಚಿತವಾದ ಮೆಚ್ಚಿನ ಪಶುಪಕ್ಷಿಗಳು ಇವೆಲ್ಲ ಬರಬಹುದು. ಶೈಲಿಯು ಚೊಕ್ಕ ಮನೆಮಾತಿನದೇ. ಕೆಲವು ಸ್ವಾರಸ್ಯದ ಶಬ್ದಗಳ ಮತ್ತು ಮಾತುಗಳ ಪೌನಪುನ್ಯವಿರಬೇಕು. ಎರಡನೆಯು ಜಾತಿಯದು ಅದ್ಭುತಕತೆಗಳು. ಅವುಗಳಿಗೂ ಮೊದಲಿನ ಮೆಟ್ಟಲು ಮಗುವಿನ ಅನುಭವವೇ. ಆದರೆ ಅಲ್ಲಿಂದ ಅದು ಕಲ್ಪನೆಯ ರಾಜ್ಯಕ್ಕೆ ಹಾರಲು ಸಾಧ್ಯವಾಗುವಂತೆ ಅವು ಇರತಕ್ಕದು. ಇಂತಹ ಕತೆಗಳಲ್ಲಿ ಆಟದಗೊಂಬೆಗಳು ಮೃಗಪಕ್ಷಿಗಳು ಮುಂತಾದುವೆಲ್ಲ ಮಾತಾಡಬಹುದು. ಅಸಾಧಾರಣವಾದ ಅಮಾನುಷವಾದ ಕೆಲಸಗಳನ್ನೂ ಮಾಡಬಹುದು. ಮಗುವಿನ ಕಲ್ಪನಾ ಪ್ರಪಂಚದಲ್ಲಿ ಅವೆಲ್ಲವೂ ಸಾಧ್ಯ: ಸಹಜ; ಸ್ವಾರಸ್ಯ.

ಎಂಟರಿಂದ ಹತ್ತುವರುಷಗಳ ವರೇಗಿನ ಮಕ್ಕಳ ಸಾಹಿತ್ಯದ ಪದ್ಯಗಳೆಂದರೆ ಆ ವಯಸ್ಸಿನವರ ಅನುಭವಕ್ಕೂ ಅಭಿರುಚಿಗೂ ತಿಳಿವಿಗೂ ತಕ್ಕುದಾದ ಕಥಾಪದ್ಯಗಳು; ಮತ್ತು ಮಕ್ಕಳ ದೃಷ್ಟಿಗೆ ಬೀಳುವ ಜನಜೀವನ ವೃತ್ತಿ ವಸ್ತು ಪ್ರಕೃತಿ ಇವುಗಳಲ್ಲಿ ಮಗುವಿನ ಮನಸ್ಸಿಗೆ ಸೊಗಸಾಗಿ ಕಾಣುವವುಗಳ ವರ್ಣನಾತ್ಮಕ ಲಘು ಕವಿತೆಗಳು. ಗದ್ಯಭಾಗದಲ್ಲಿ ಪೌರಾಣಿಕ ಕಥೆಗಳು ಮತ್ತು ಇತರ ಅದ್ಭುತ ರಸಯುಕ್ತ ಕಥೆಗಳೂ ಬರಬಹುದು. ಇವಲ್ಲದೆ ಪ್ರಪಂಚದ ಬೇರೆಬೇರೆ ಜನ ಂಗಗಳ ಮಕ್ಕಳ ಉಡಿಗೆ ತೊಡಿಗೆ ಆಟಪಾಠ ಜೀವನದ ರೀತಿ ನೀತಿ ತಿಂಡಿತಿನಸು ಮುದ್ದಿನ ಪ್ರಾಣಿಗಳು ಇವುಗಳ ಸಚಿತ್ರವಾದ

ವರ್ಣನಾತ್ಮಕ ಲೇಖನಗಳೂ ಚರಿತ್ರೆಯ ಶೂರರ ಸಾಹಸ ಕೃತ್ಯಗಳ ವೀರಕಥೆಗಳೂ ಸೇರುವುದುತ್ತಮ. ಗದ್ಯಪದ್ಯಗಳಲ್ಲಿರಬಹುದಾದ ನೀತಿಗಳನ್ನು ಮಾತಿನಿಂದ ಹೇಳಿ ಒಡೆದು ಕಾಣಿಸದೆ ಅವು ಗುಪ್ತಗಾಮಿಯಾಗಿ ಮಕ್ಕಳ ಹೃದಯವನ್ನು ಸ್ಪರ್ಶಿಸುವಷ್ಟು ಮಾತ್ರ ಇರಬೇಕು.

ಮೂರನೆಯ ಭಾಗವು ಎರಡನೆಯದರ ಮೇಲಿನ ಮೆಟ್ಟಲಾಗಿದೆ. ಮಗುವಿನ ಬುದ್ಧಿ ಹೃದಯ ಅನುಭವಗಳ ವೈಶಾಲ್ಯಕ್ಕೆ ತಕ್ಕಂತೆ ಪದ್ಯಗದ್ಯಗಳ ವಿಷಯಗಳಲ್ಲಿ ವೈವಿಧ್ಯ ಮತ್ತು ವಿಸ್ತಾರವಿರಬೇಕು. ಪ್ರಪಂಚದ ವಿಚಿತ್ರವಸ್ತುಗಳು, ಪ್ರಾಣಿಗಳು, ಪ್ರಕೃತಿಯ ವಿಚಿತ್ರಗಳು, ವಿಜ್ಞಾನಯುಗದ ಅದ್ಭುತ ಸಾಹಸ ಕೃತ್ಯಗಳು, ಮಹಾಪುರುಷರು, ಇವುಗಳಲ್ಲಿ ಮಕ್ಕಳ ಕುತೂಹಲ ವೃಷ್ಟಿಗೂ ಅಭಿರುಚಿಗೂ ಮೆಚ್ಚಿಗೆಯಾಗುವ ವಿಷಯಗಳನ್ನೆತ್ತಿ ಬರೆದ ವಾಙ್ಮಯವೂ ಸೇರಬೇಕು.

ನಾಲ್ಕನೆಯ ವಿಭಾಗವು ಕರ್ಣಾಟಕ ಸಾಹಿತ್ಯಕ್ಕೂ ವಾಙ್ಮಯಕ್ಕೂ ಪ್ರವೇಶಗೊಳಿಸುವ ಹಸ್ತಕದ ಲಕ್ಷಣಗಳಿಂದ ಕೂಡಿರತಕ್ಕದು. ಕನ್ನಡದ ಮತ್ತು ಇತರ ಸಾಹಿತ್ಯದ ಗದ್ಯ ಪದ್ಯ ನಾಟಕ ಕಾದಂಬರಿ ಮುಂತಾದ ವಾಙ್ಮಯದ ವಿವಿಧ ಭಾಗಗಳನ್ನು ಮಕ್ಕಳಿಗನುಕೂಲವಾಗುವಂತೆಯೂ ಮುಂದೆ ಅವರು ಅವುಗಳನ್ನು ಪೂರ್ಣವಾಗಿ ಓದಬೇಕೆಂಬ ಕುತೂಹಲವು ಅವರಲ್ಲುಂಟಾಗುವಂತೆಯೂ ಸಂಕ್ಷೇಪಿಸಿಯಾಗಲೀ ರಸವತ್ತಾದ ಭಾಗಗಳನ್ನು ಸಂಗ್ರಹಿಸಿಯಾಗಲೀ ಬರೆದ ಸರಳ ಗದ್ಯಮಾಲೆ; ಕನ್ನಡಪದ್ಯ ಕಾವ್ಯಗಳಿಂದ ಮಕ್ಕಳ ದೃಷ್ಟಿಯಲ್ಲಿ ಸ್ವಾರಸ್ಯವಾಗಿರುವ ಭಾಗಗಳನ್ನು ಆಯ್ದುಮಾಡಿರುವ ಕಾವ್ಯ

ಸಂಗ್ರಹಮಾಲೆ; ಪ್ರಪಂಚದ ಬೇರೆ ಬೇರೆ ಜನಾಂಗಗಳ ಸಾಮಾಜಿಕ ವ್ಯಾವಹಾರಿಕ ರೀತಿ ನೀತಿಗಳನ್ನೂ ವಿಜ್ಞಾನಯುಗದ ಜೀವನ ಸೌಲಭ್ಯ ಸೌಕರ್ಯಗಳನ್ನೂ ಸಾಧನಗಳನ್ನೂ ಸಚಿತ್ರವಾಗಿ ವಿವರಿಸುವ ವಾಙ್ಮಯ ಪುಸ್ತಕಮಾಲೆ; ಇವೆಲ್ಲವುಗಳಿಂದ ಕೂಡಿದುದಾಗಿರಬೇಕು ಈ ಕೊನೆಯ ವಿಭಾಗ.

ಮೇಲೆ ಹೇಳಿದುದೆಲ್ಲ ಬಾಲವಾಙ್ಮಯದ ಪ್ರಾಮುಖ್ಯ ಲಕ್ಷಣವನ್ನೂ ಕ್ಷೇತ್ರವೈಶಾಲ್ಯವನ್ನೂ ಸೂಚಿಸುವುದಕ್ಕೆ ಮಾತ್ರವಾಗಿದೆ. ಕನ್ನಡದಲ್ಲಿ ಬಾಲವಾಙ್ಮಯದ ಹಾದಿಯು ಕಡಿಯಲ್ಪಡಲು ಈಗತಾನೆ ತೊಡಗಿದೆಯಷ್ಟೆ. ಅದು ಹೇಗೆ ಕವಲೊಡೆದು ಬಹುಮುಖವಾಗಿ ಮುಂದುವರಿಯುತ್ತ ಹೋಗಬಹುದೆಂದೂ ಅಂತಹ ವಾಙ್ಮಯದಲ್ಲಿ ವಿಹರಿಸಿ ಅದರ ಫಲವನ್ನು ಸವಿದ ಮಕ್ಕಳಲ್ಲಿ ವಾಚನಾಭಿರುಚಿಯು ನೆಲೆನಿಂತು ಮುಂದೆ ಅವರು ಜೀವಮಾನಕಾಲವೆಲ್ಲ ಓದುಗರಾಗಿ ಬಾಳುತ್ತ ಕರ್ಣಾಟಕ ವಾಙ್ಮಯದ ಪ್ರೋತ್ಸಾಹಕರೂ ಪೋಷಕರೂ ಆಗುವುದಲ್ಲದೆ, ಭಾಷಾಪ್ರೇಮ ದೇಶಪ್ರೇಮಗಳಿಂದ ತುಂಬಿದ ವಿಚಾರಿಗಳೂ ಜ್ಞಾನಿಗಳೂ ಉತ್ಸಾಹಿಗಳೂ ಸುಖಿಗಳೂ ರಸಿಕರೂ ಆಗಿ ತಮ್ಮ ಜನ್ಮಸಾರ್ಥಕ್ಯವನ್ನು ಹೊಂದಬೇಕಾದರೆ ಅವರ ಕೈಯಲ್ಲಿ ಕೊಡಬೇಕಾಗಿರುವ ಪುಸ್ತಕಗಳು ಹೇಗಿರಬೇಕೆಂದೂ, ಅವುಗಳ ಕೆಲವು ರೂಪರೇಖೆಗಳನ್ನು ಮಾತ್ರ ಇಲ್ಲಿ ಎಳೆದು ತೋರಿಸಲು ಪ್ರಯತ್ನಿಸಲಾಗಿದೆ. ಇಂಗ್ಲಿಷ್‌ಭಾಷೆಯೊಂದರಲ್ಲೇ ಇರುವ ಬಾಲವಾಙ್ಮಯದ ವಿಸ್ತಾರವನ್ನೂ ವೈವಿಧ್ಯವನ್ನೂ ಪರಿಶೀಲಿಸಿದ್ದಲ್ಲಿ ನಮ್ಮ ಕನ್ನಡ ಬಾಲವಾಙ್ಮಯಕ್ಕೂ ಎಂತೆಂತಹ ವಿಷಯಗಳನ್ನು ಹೇಗೆ ಹೇಗೆ ತಂದು

ಕೊಳ್ಳಬಹುದೆಂಬ ಕೂಲಂಕಷ ವಿಚಾರವು ಹೊಳೆಯದಿರದು. ಇಂಗ್ಲಿಷ್ ಬಾಲವಾಙ್ಮಯದ ವಿಚಾರ ಪರವಾದ ಅನುಕರಣದಿಂದ ಕನ್ನಡದಲ್ಲಿಯೂ ಉತ್ಕೃಷ್ಟ ಬಾಲವಾಙ್ಮಯವನ್ನು ಶೀಘ್ರದಲ್ಲೇ ನಿರ್ಮಾಣ ಮಾಡಿಕೊಳ್ಳಬಹುದು. ಒಂದೇ ಮಾತಿನಿಂದ ಹೇಳುವುದಾದರೆ, ನಮ್ಮ ಬಾಲವಾಙ್ಮಯವನ್ನು ನೋಡಿ ಮುಂದಿನ ಕನ್ನಡಿಗರು ಹೇಗಾಗುವರೆಂದು ಒರೆಗೆ ಹಚ್ಚಲು ಬರುತ್ತದೆಂಬುದನ್ನು ಕರ್ಣಾಟಕಾಭಿಮಾನಿಗಳೆಲ್ಲರೂ ಲಕ್ಷ್ಯದಲ್ಲಿಟ್ಟುಕೊಂಡು ಕಾರ್ಯತತ್ಪರರಾಗಬೇಕಾಗಿರುವ ಕಾಲವಿದು. ಇಂದಿನ ಕನ್ನಡ ಬಾಲವಾಙ್ಮಯವೇ ನಾಳಿನ ಕನ್ನಡ ವಾಙ್ಮಯದ ತಳಗಟ್ಟು. ನಾಳಿನ ಕನ್ನಡಿಗರ ಸುಖ ಸಂತೋಷ ಸಹೃದಯತೆ ವಾಙ್ಮಯಪ್ರೇಮ ಕನ್ನಡ ಸಂಸ್ಕೃತಿಯ ರಕ್ಷಣೆ ಇವೆಲ್ಲವೂ ಈಗ ತೊಡಗಬೇಕಾಗಿರುವ ಬಾಲವಾಙ್ಮಯನಿರ್ಮಾಣದ ಮೇಲೆ ಆಧರಿಸಿಕೊಂಡಿವೆ. ಗ್ರಾಮಸಂಘಟನೆ, ಗ್ರಾಮೋದ್ಧಾರ, ಪ್ರಾಥಮಿಕ ವಿದ್ಯಾಪ್ರಚಾರ ಎಂಬ ಕೂಗು ಕೇಳುತ್ತಿರುವ ಈ ಕಾಲದಲ್ಲಿ ಅವುಗಳಿಗೆಲ್ಲ ಅಡಿಗಲ್ಲಾಗಿರುವ ಈ ಬಾಲವಾಙ್ಮಯದ ವಿಷಯವನ್ನೆತ್ತಿ ಪತ್ರಿಕೆಗಳು ಜಾಗ್ರತಿಯನ್ನುಂಟುಮಾಡಬೇಕಾಗಿದೆ. ಒಂದೇ ಅಚ್ಚಿನಿಂದ ಎರಕ ಹೊಯ್ದಂತೆ ಇನ್ನೂ ಇನ್ನೂ ಹೊಸ ಪತ್ರಿಕೆಗಳನ್ನು ಹೊರಡಿಸುವುದಕ್ಕಿಂತ ಕೆಲವು 'ಮಕ್ಕಳಪತ್ರಿಕೆ' ಗಳಾಗಿಯೋ 'ಮಕ್ಕಳಪುಸ್ತಕ' ಗಳಾಗಿಯೋ ಹೊರಡುವುದು ಮೇಲು. ವಿದ್ಯಾಂಗದವರೂ ಕೇವಲ ಶಾಲೆಗಳ ಸಂಖ್ಯೆಗಳು ಏರಿದುದರಿಂದಾಗಲೀ 'ಸಿಲೆಬಸ್ಸಿ' ನ ವಿಷಯಗಳ ಪರೀಕ್ಷಾ ಫಲವು ಉತ್ತಮವಾದುದರಿಂದಾಗಲೀ ಸಾರ್ಥಕವಾದ ವಿದ್ಯಾ

ಭ್ಯಾಸವು ನಡೆಯುತ್ತದೆಂದು ತೃಪ್ತರಾಗದೆ ಶಾಲೆಗಳಲ್ಲಿ ಬಾಲವಾಙ್ಮಯದ ಪುಸ್ತಕ ಭಂಡಾರವು ತುಂಬಿರುವಂತೆ ಪ್ರೋತ್ಸಾಹಿಸುವುದೂ ಅತ್ಯಾವಶ್ಯಕವಾಗಿದೆ. ಯಾವ ಶಾಲೆಯಲ್ಲಿ ಮಕ್ಕಳ ಪುಸ್ತಕಗಳ ದೊಡ್ಡ ಪುಸ್ತಕ ಭಂಡಾರವಿದೆಯೋ, ಮಕ್ಕಳು ಮೆಚ್ಚುವ ಪುಸ್ತಕಗಳು ಧಾರಾಳವಾಗಿ ಅವರಿಗೆ ಓದಲಿಕ್ಕೆ ದೊರಕುತ್ತಿದೆಯೋ, ವಾರದಲ್ಲಿ ಒಂದೆರಡು ಪಾಠಗಳನ್ನು (Library periods) ವಾಚನಕಾಲವಾಗಿ ಉಪಯೋಗಿಸಿಕೊಂಡು ಮಕ್ಕಳ ಪುಸ್ತಕಗಳ ಕಲಕೆಲವು ಭಾಗಗಳನ್ನು ಓದಿ ಹಾಡಿ ಮಕ್ಕಳಲ್ಲಿ ಓದುವ ಕುತೂಹಲವನ್ನೂ ಆಶೆಯನ್ನೂ ಎಬ್ಬಿಸಿ ಮನೆಯೋದಿಗೆ ಪುಸ್ತಕಗಳನ್ನು ಕೊಡುವ ವ್ಯವಸ್ಥೆ ಇದೆಯೋ, ಆ ಶಾಲೆಯು ಕಟ್ಟೋಣದಲ್ಲಿ ನಿಯಮದ ಮಟ್ಟವನ್ನು ಮುಟ್ಟದಿರಲಿ, ಡೆಸ್ಕು ಬೆಂಚುಗಳು ತಕ್ಕ ರೀತಿಯಲ್ಲಿಲ್ಲದಿರಲಿ, ಶಿಕ್ಷಣೋಪಕರಣಗಳು ಬೇಕಷ್ಟು ಇಲ್ಲದಿದ್ದರೂ ವರ್ಷಾಂತ್ಯದಲ್ಲಿ ಸಿಲೆಬಸ್ಸಿನ ಕೊನೆಯನ್ನು ಮುಟ್ಟದಿದ್ದರೂ— ಇವೆಲ್ಲವುಗಳು ತೃಪ್ತಿಕರವಾಗಿದ್ದು ಮಕ್ಕಳ ಪುಸ್ತಕ ಭಂಡಾರವಿಲ್ಲದಿರುವ ಶಾಲೆಗಿಂತ ಉತ್ತಮ ತರವಾದ ಶಾಶ್ವತವಾದ ನಿಜವಾದ ವಿದ್ಯೆಯನ್ನು ಕೊಡುತ್ತಿದೆ ಎಂದು ತಿಳಿಯಬೇಕು. ಶಾಲೆಯ ವಿವಿಧ ಅಂಗಗಳಲ್ಲಿ ಶಿರೋಪ್ರಾಯವಾದುದು ಬಾಲವಾಙ್ಮಯ ಪುಸ್ತಕಭಂಡಾರ. ಶಾಲೆಯ ಆವಶ್ಯಕತೆಗಳಲ್ಲಿ ಪ್ರಥಮ ಪೂರೈಸಿಕೊಳ್ಳಬೇಕಾದುದು ಅದನ್ನು. ಅದಿದ್ದರೆ ಎಲ್ಲವೂ ಚಂದ, ಎಲ್ಲವೂ ಸಾರ್ಥಕ. ಅದೊಂದಿಲ್ಲದಿದ್ದರೆ ಬೇರೇನಿದ್ದರೂ ಅಷ್ಟಷ್ಟೆ! ಅದೆಲ್ಲವೂ ಸರಿ, ಆದರೆ ಬಾಲವಾಙ್ಮಯದ ಪುಸ್ತಕಗಳೆಲ್ಲಿವೆ? ಎಂದು ಕೇಳ

ಬಹುದು. ಉಪಾಧ್ಯಾಯರು ಶಾಲೆಗಳಲ್ಲಿ ಅಂತಹ ಪುಸ್ತಕ ಭಂಡಾರವನ್ನು ಸ್ಥಾಪಿಸುವ ಉತ್ಸಾಹ ತೋರತೊಡಗಿದರೆ ಪುಸ್ತಕಗಳ ರಚನೆಗೂ ಪ್ರೋತ್ಸಾಹ ಸಿಕ್ಕುವುದು. ಗ್ರಾಹಕರ ಕೇಳಿಕೆಯು (demand) ಹೆಚ್ಚಿದಂತೆಲ್ಲ ಪೂರೈಕೆ (supply) ಯೂ ಹೆಚ್ಚುತ್ತ ಹೋಗುವುದು ವ್ಯವಹಾರದ ಮರ್ಮ. ಈ ಬಾಲವಾಙ್ಮಯದ ವಿಷಯದಲ್ಲಿಯೂ ಅಂತೆಯೇ. ಎಂದಮೇಲೆ ಇಂತಹ ಮಕ್ಕಳ ಪುಸ್ತಕಭಂಡಾರವನ್ನು ತೆರೆಯಲಿಕ್ಕೆ ಬೇಕಾದ ದುಡ್ಡು ಯಾರಿಂದ ಬರಬೇಕು ಎಂಬುದೊಂದು ಪ್ರಶ್ನೆ ಸಹಜವಾಗಿ ಏಳುತ್ತದೆ. ದುಡ್ಡು ಶಾಲಾಮೆನೇಜರರಿಂದ ಬರಲಾರದು. ಅವರು ಈಗಾಗಲೇ ಸೋತು ಕಂಗೆಟ್ಟಿದ್ದಾರೆ; ಬೋರ್ಡಿನಿಂದಲೂ ಸಾಧ್ಯವಾಗದ ಮಾತು.' ಲ್ಯಾಬ್ರೇರಿಫೀಸ್' ಎಂದು ಆರುತಿಂಗಳಿಗೊಮ್ಮೆ ಎರಡಾಣೆಯಂತೆ ಪ್ರತಿಯೊಬ್ಬ ವಿದ್ಯಾರ್ಥಿಯಿಂದಲೇ ಆ ಹಣವು ಬರಬೇಕಾಗಿದೆ. ಈಗಂತೂ ವಿದಾರ್ಥಿಗಳು ಕೊಂಡುಕೊಳ್ಳುವ ಪುಸ್ತಕಗಳನ್ನು ಸಾಧ್ಯವಿದ್ದಷ್ಟು ಕಡಿಮೆ ಮಾಡಬೇಕೆಂಬ ಧೋರಣೆ ಇದೆ. ಆದುದರಿಂದ ಹಿಂದಿಗಿಂತ ಈಗ ಮಕ್ಕಳು ಕೊಂಡುಕೊಳ್ಳುವ ಅಚ್ಚಿನ ಪುಸ್ತಕಗಳಾಗಲೀ ಎಕ್ಸರ್‌ಸ್ಯಾಜ್ ಪುಸ್ತಕಗಳಾಗಲೀ ಕಡಿಮೆಯಾಗಿವೆ. ಇನ್ನೂ ಕಡಿಮೆಯಾಗುತ್ತಾ ಬರುತ್ತಿವೆ. ಪರಿಣಾಮವಾಗಿ ಪ್ರತಿಯೊಬ್ಬ ವಿದ್ಯಾರ್ಥಿಯ ಪುಸ್ತಕದ ವೆಚ್ಚದಲ್ಲಿ ಈಗ ಹೆತ್ತವರಿಗೆ ಎಂಟಾಣೆಯಿಂದ ಎರಡುಮೂರು ರೂಪಾಯಿಗಳವರೆಗೂ ಉಳಿತಾಯವಿದೆ. ಆದುದರಿಂದ ಇದೊಂದು ಹೆಚ್ಚಿನ ವೆಚ್ಚವೆಂದು ಹೆತ್ತವರು ಆಕ್ಷೇಪಿಸಲು ನ್ಯಾಯವಿಲ್ಲ. ಒಂದು ವೇಳೆ ಅಧಿಕವ್ಯಯವೇ ಎಂದಾದರೂ, ತಮ್ಮ ಮಕ್ಕಳಿಗಾಗಿ

ಈ ಪುಡಿಕಾಸನ್ನು ಕೊಡಲಾರದಷ್ಟು ಬಡವರೆಂದು ಹೇಳುವ ಹೆತ್ತವರು ಇರಲಾರರು. ಇರುವುದಾದರೆ ಅವರ ಆ ಮಟ್ಟಿನ ಬಡತನವೆಂಬುದು ಕೇವಲ ಕಾಲ್ಪನಿಕ. ಇಷ್ಟವಿಲ್ಲದುದಕ್ಕೆ ಹೇಳುವ ಕಣ್ಣುಕಟ್ಟಿನಮಾತು. ಏಕೆಂದರೆ, ಅಂತಹರಜೀವನದ ರೀತಿ ನೀತಿಗಳನ್ನು ಪರಿಶೀಲಿಸಿದರೆಅನವಶ್ಯಕವಾದ ಹಲವು ವಿಷಯಗಳಿಗಾಗಿ ಇಂತಹ ಎಷ್ಟೋ ಎರಡಾಣೆಗಳು ಅವರ ಕೈಯಿಂದ ಚೆಲ್ಲಿಹೋಗುತ್ತಿರುವುದು ಕಾಣಬರುವುದು. ಒಂದುವೇಳೆ ಸಂಬಳ ಕೊಡಲು ಬಡತನವೆಂದರೂ ನ್ಯಾಯವಾಗುವ ಕೆಲವು ಸಂದರ್ಭಗಳಿರಬಹುದು. ಆದರೆ ತನ್ನ ಮಗುವಿನ ವಿದ್ಯಾಭ್ಯಾಸದ ಹೆಸರಲ್ಲಿ ಶಾಲೆಗೆ ಈ ಎರಡಾಣೆಯ ಕಾಣಿಕೆಯನ್ನು ಕೊಡಲು ಭಿಕ್ಷುಕನಿಗೂ ಸಾಧ್ಯವೇ. ಆದರೆ ಹೆತ್ತವರಲ್ಲಿ ಹೆಚ್ಚಿನವರು ಸಂಬಳಕೊಡಲಿಕ್ಕೇ ಕಷ್ಟವಾಗಿದೆ ಎನ್ನುತ್ತಿರುವಾಗ ಈ ಲ್ಯಾಬ್ರೇರಿ ಫೀಸನ್ನೂ ಹೊರಿಸಿದರೆ ಅವರು ಕೊಡುವುದುಂಟೇ ಎಂದು ನಮ್ಮ ಉಪಾಧ್ಯಾಯಬಂಧುಗಳು ಸಂಶಯ ಪಡಬಹುದು. ಹೌದು, ಸಂಬಳವನ್ನು ಬರಮಾಡಿಸಿಕೊಳ್ಳುವ ಅವರ ಅನುಭವವು ಅಷ್ಟು ಕಹಿಯಾಗಿದೆ. ಶಾಲೆಗೆ ಬರುವ ಮಕ್ಕಳಲ್ಲಿ ಹೆಚ್ಚಿನವರು ಸಂಬಳವನ್ನು ಸರಿಯಾಗಿ ಕೊಡುವುದೇ ಇಲ್ಲ. ಕೇಳಿದಾಗಲೆಲ್ಲ ಬಡತನದ ಜೋಲುಮೋರೆ ಹಾಕುವರು. ಆದರೆ ಪ್ರಾಥಮಿಕ ವಿದ್ಯಾಭ್ಯಾಸದ ಆ ಕೆಲವು ಆಣೆಗಳ ಸಂಬಳವನ್ನೂ ಕೊಡಲಾರದಷ್ಟು ಅವರು ನಿಜವಾಗಿ ಬಡವರಾಗಿರುವರೆ? ಹಾಗೆ ಬಡವರೆಂದು ಹೇಳುವವರೇ ಬೆಳಗ್ಗೆ ಮನೆಯ ಗಂಜಿಯೂಟವನ್ನು ಬಿಟ್ಟು ಹಳ್ಳಿಯ ಕಾಫಿಯಂಗಡಿಗೆ ಬರುತ್ತಾರೆ. ಸಾಯಂಕಾಲ ತಿರುಗಿ ಅಲ್ಲಾಗಲೀ ಬೇರೆ ಕಡೆಯು

ಲ್ಲಾಗಲೀ ದುಡ್ಡು ಬಿಚ್ಚುತ್ತಾರೆ. ಅವರೇ ಪೇಟೆಗೆ, ಸಂತೆಗೆ, ಆಟಕ್ಕೆ, ಕೋಳಿಯಂಕಕ್ಕೆ, ಕೋಲನೇಮಗಳಿಗೆ, ಉತ್ಸವಗಳಿಗೆ ಹೋದಾಗ ಅವರಹಿಂದೆ ಹೋಗಿ ಅವರು ಅನವಶ್ಯಕವಾಗಿ ವೆಚ್ಚಮಾಡುವ ರೀತಿನೀತಿಗಳನ್ನು ಪರಿಶೀಲಿಸಿದರೆ, ಹಬ್ಬ-ಹುಣ್ಣಿಮೆ ಮದುವೆ-ಮುಂಜಿ ಹವ್ಯ-ಕವ್ಯ ಹರಿಕೆ-ಕಾಣಿಕೆ ಇವುಗಳಲ್ಲೆಲ್ಲ ತಮಗೆಂದು ತಮ್ಮ ಮಕ್ಕಳಿಗೆಂದು ತಿರುಳಿಲ್ಲದ ಆಚರಣೆಗಳ ಹೆಸರಲ್ಲಿ ಬಾಹ್ಯಾಡಂಬರಕ್ಕಾಗಿ ಎಷ್ಟು ವೆಚ್ಚಮಾಡುತ್ತಾರೆಂಬುದನ್ನು ನೋಡಿದರೆ, ಮನೆಗಳಲ್ಲಿ ಅವರ ಸಾಮಾನ್ಯ ಜೀವನದ ಹದ್ದುಪದ್ಧತಿಗಳನ್ನು ಕಣ್ಣಿಟ್ಟು ಪರೀಕ್ಷಿಸಿದರೆ, ಸಂಬಳದ ಆ ಕೆಲವು ಆಣೆಗಳನ್ನು ಕೊಡಲಾರದಂತಹ ದುರವಸ್ಥೆಗೆ ಅವರನ್ನು ಇಳಿಸಿರುವ ಆ ಬಡತನವು ಅಲ್ಲೆಲ್ಲೂ ಕಾಣಬರುವುದಿಲ್ಲ. ಅವೆಲ್ಲಕ್ಕೂ ಅವರಲ್ಲಿ ದುಡ್ಡಿದೆ! ಅವೆಲ್ಲವೂ ಅವರಿಗೆ ಜೀವನದಲ್ಲಿ ಅನಿವಾರ್ಯವೂ ಅತ್ಯಾವಶ್ಯಕವೂ ಆದ ವಿಷಯಗಳಾಗಿವೆ. ಆದುದರಿಂದ ಅವಕ್ಕೆಲ್ಲ ಅವರು ಹೇಗಾದರೂ ದುಡ್ಡು ಒದಗಿಸಿಕೊಳ್ಳುವರು. ವೆಚ್ಚಮಾಡುವುದರಲ್ಲಿಯೂ ಕಸಿವಿಸಿಯಿಲ್ಲ. ಆದರೆ ಮಕ್ಕಳ ಸಂಬಳ ಎಂದ ಕೂಡಲೇ ಎತ್ತಣಿಂದಲೋ ಹಾರಿ ಬಂದು ಅವರ ಕಣ್ಣೆದುರಿಗೆ ನಿಲ್ಲುವುದು ಆ ಬಡತನ! ಆ ವೆಚ್ಚವೂ ಅನಿವಾರ್ಯವೆಂದು ಅವರು ತಿಳಿದುಕೊಂಡಿಲ್ಲ. ಅವರು ತಿಳಿದುಕೊಂಡಿರುವುದೇ ಬೇರೆ— ಶಾಲೆಯಿರುವುದು ಉಪಾಧ್ಯಾಯರಿಗಾಗಿ! ಶಾಲೆ ತುಂಬ ಮಕ್ಕಳಾಗುವಂತೆ ಅವರು ನೋಡಿಕೊಳ್ಳದಿದ್ದರೆ ಅವರಿಗೆ ಮೇಲಿನಿಂದ ಬರುವುದು ಏಟು! ತಾವು ಮಕ್ಕಳನ್ನು ಶಾಲೆಗೆ ಕಳುಹಿಸಿ ಉಪಾಧ್ಯಾಯರನ್ನು ಆ ಏಟಿನಿಂದ

ತಪ್ಪಿಸಿರುವೆವು. ತಾವಷ್ಟು ಉಪಕಾರ ಮಾಡಿದುದು ಸಾಲದೆ? ಆದರ ಮೇಲೆ ಸಂಬಳವೆಂದರೆ? ಗದ್ದೆ ಹೊಲಗಳಲ್ಲಿ ಹಟ್ಟಿ ಕೊಟ್ಟಿಗೆ ಮನೆಗಳಲ್ಲಿ ಚಿಲ್ಲರೆ ಕೆಲಸಕ್ಕೆ ಬೀಳುವ ಮಕ್ಕಳನ್ನು ಉಪಾಧ್ಯಾಯರ ಒತ್ತಾಯಕ್ಕಾಗಿ ಅವರ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಶಾಲೆಗೆ ಕಳುಹಿಸುತ್ತಿರುವುದೇ ತಾವು ತೋರುತ್ತಿರುವ ಮಹತ್ತಾದ ತ್ಯಾಗ! ಎಂಬುದು ಹಲವರ ತಲೆ. ಎಂದು ಉಪಾಧ್ಯಾಯರು ಮನೆ ಮನೆಗೆ ಹೋಗಿ ಮಕ್ಕಳನ್ನು ಕಳುಹಿಸಿಕೊಡಿರೆಂದು ,ಚಾಲುವರಿದು ಬೇಡಲಿಕ್ಕೆ ತೊಡಗಿದರೋ ಸಮೀಪವಿರುವ ಶಾಲೆಗಳವರೊಳಗೆ ಮಕ್ಕಳ ಸಂಗ್ರಹಕ್ಕಾಗಿ ಎಂದು ಸ್ಪರ್ಧೆಯು ತೊಡಗಿತೋ ಅಂದಿನಿಂದ ಹೆತ್ತವರ ತಲೆಯೊಳಗೆ ಈ ವಿಕಲ್ಪ ಕಲ್ಪನೆಯು ಹೊಕ್ಕು ಪ್ರಬಲವಾಗುತ್ತಾ ಬರುತ್ತಿದೆ. ತಮ್ಮ ಮಕ್ಕಳಿಂದಾಗಿ ಉಪಾಧ್ಯಾಯರಿಗೇನೋ ಮಹತ್ತಾದುದು ದೊರೆಯುತ್ತದೆಂದೂ ಆದುದರಿಂದಲೇ ಅವರು ಮನೆ ಬಾಗಿಲಿಗೆ ಬಂದು ಮಕ್ಕಳನ್ನು ಕಳುಹಿಸಿಕೊಡಿರೆಂದು ಚಾಲುವರಿದು ಬೇಡಿಕೊಳ್ಳುತ್ತಾರೆಂದೂ ಅವರು ತಿಳಿಯತೊಡಗಿದರು. ಉಪಾಧ್ಯಾಯರಿಗೆ ಮಕ್ಕಳಿಂದಾಗಿ ಲಾಭವಿರುವಾಗ ಧರ್ಮಾರ್ಥವಾಗಿ ಅವರೇಕೆ ಕಲಿಸಬಾರದೆಂದು ಅವರಿಗೆ ತೋರಿತೋ ಏನೊ! ಅಂತೂ ತಮ್ಮಲ್ಲಿ ಸಂಬಳ ಕೊಡಲು ದುಡ್ಡಿಲ್ಲವೆಂದರು. ಸಂಬಳ ಕೊಡಬೇಕಾಗಿಲ್ಲವೆಂದಾಗ ಸ್ಲೇಟು ಪುಸ್ತಕಗಳಿಗೆ ಕಾಸಿಲ್ಲವೆಂದರು. ಅವನ್ನೂ ಕೊಡುತ್ತೇವೆಂದರೆ ಮಕ್ಕಳ ಹಿಟ್ಟು-ಬಟ್ಟೆಗೇನು ವ್ಯವಸ್ಥೆ ಮಾಡುವಿರೆಂಬ ಪ್ರಶ್ನೆಯೂ ಬರುವುದರಲ್ಲಿ ಸಂದೇಹವಿಲ್ಲ. 'ಹೊತ್ತುಕೊಂಡು ಹೋಗುವವರಿದ್ದರೆ ............' ಎಂಬ ಮನೋವೃತ್ತಿ

ಯೇ ಹೆಚ್ಚಿನವರಲ್ಲಿ. ಸಂಬಳಕ್ಕಾಗಿ ಕೊಡುವ ಕೆಲವು ಆಣೆಗಳು ಉಳಿದರೆ ನಾಲ್ಕು ದಿನದ ಕಾಫಿ'ಕಾಸಾಯಿತು ಎಂಬ ತರದ ಯೋಚನೆಯಲ್ಲದೆ ನಿಜವಾದ ಬಡತನದ ಕೂಗಲ್ಲ ಅವರದು. ಧರ್ಮಕ್ಕೆ ಆಗುವುದಿದ್ದರೆ ಆಗಲೊಲ್ಲದೇಕೆ? ಎಂದು ನೋಡುವ ಜಾಣ್ಮೆಯೇ ಹಲವರಲ್ಲಿ. ಹಾಗಿಲ್ಲದಿದ್ದರೆ ಸಂಸಾರದ ಹೊಟ್ಟೆ-ಬಟ್ಟೆಯ ಕನಿಷ್ಠಾವಶ್ಯಕತೆಯನ್ನು ತೀರಿಸಿಕೊಂಡ ಮೇಲೆ ಉಳಿಯುವ ಹಣದಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಬೇಕಷ್ಟನ್ನು ಮೊದಲಾಗಿ ತೆಗೆದುಕೊಡದೆ ಕಂಡದ್ದಕ್ಕೆಲ್ಲ ವೆಚ್ಚಮಾಡಿ ಕೊನೆಗೆ ಸಂಬಳ ಕೇಳಿದಾಗ ಆ ಕೆಲವು ಆಣೆಗಳಿಗಾಗಿ 'ಬಡತನ! ಬಡತನ!' ಎನ್ನುವ ಲಜ್ಜಾಸ್ಪದವಾದ ವರ್ತನೆಗೆ ಏನೆನ್ನಬೇಕು! ನಿಜವಾಗಿಯೂ ಸಂಬಳವನ್ನು ತೆರಲಾರದಷ್ಟು ಬಡತನವಿರುವವರು ಬರೇ ಕೆಲವರು. ಅವರ ಮಟ್ಟಿಗೆ ಸಂಬಳ ಮಾಫಿ ಮಾಡಬೇಕಾದುದೇನೋ ಆವಶ್ಯಕ! ಆದರೆ ಅವರೂ ವರುಷಕ್ಕೆ ನಾಲ್ಕಾಣೆಯ ಕಾಸನ್ನು ಲ್ಯೈಬ್ರೆರಿಫೀಸಾಗಿ ಕೊಡಲಾರದವರಾಗಿಲ್ಲ.

ಆದುದರಿಂದ ವರುಷಕ್ಕೆ ಕನಿಷ್ಠಪಕ್ಷ ನಾಲ್ಕಾಣೆಯನಾದರೂ ಲ್ಯಾಬ್ರೇರಿಫೀಸಾಗಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಖಡ್ಡಾಯವಾಗಿ ತೆಗೆದುಕೊಳ್ಳಬೇಕು. ಹೀಗೆ ಒಟ್ಟಾಗುವ ಮೊತ್ತದಷ್ಟಲ್ಲವಾದರೆ ಗಣನೀಯವಾದೊಂದು ಅಂಶದಷ್ಟಾದರೂ 'ಲ್ಯಾಬ್ರೇರಿಗ್ರ್ಯಾಂಟ್' ಆಗಿ ದೊರಕಬೇಕೆಂದು ವಿದ್ಯಾಂಗದವರನ್ನು ಕೇಳಿಕೊಳ್ಳಬೇಕು. ಆಯಾ ಗ್ರಾಮಗಳ ಪರಸ್ಪರ ಸಹಾಯಕ ಸಂಘಗಳು ತೆಗೆದಿಡುವ ಸಾರ್ವಜನಿಕ ಕ್ಷೇಮನಿಧಿಯನ್ನು ಈ ಬಾಲವಾಙ್ಮಯ ಪುಸ್ತಕ ಭಂಡಾರಕ್ಕಾಗಿ

ಕೊಡುವಂತೆ ಕೇಳಿಕೊಳ್ಳಬೇಕು. ಮುಂದಿನ ಗ್ರಾಮಸ್ಥರನ್ನು ರೂಪಿಸುವ ಈ ಬಾಲವಾಙ್ಮಯ ಪುಸ್ತಕ ಭಂಡಾರದ ಸ್ಥಾಪನೆಗಿಂತ ಮಿಕ್ಕಿದ ಸಾರ್ವಜನಿಕ ಹಿತಕಾರ್ಯವು ಬೇರೊಂದಿರಲಾರದು. ಇಂದಿನವರು ಮುಂದಿನವರಿಗಾಗಿ ಮಾಡಬೇಕಾಗಿರುವ ಕರ್ತವ್ಯವೇ ಇದು. ಎಂದ ಮೇಲೆ ಅವರೂ ಮನಸ್ಸು ಮಾಡಿಯಾರು. ಹೀಗೆ ನಾಲ್ಕಾರು ವರುಷಗಳು ನಡೆದರೆ ಬಾಲವಾಙ್ಮಯ ಪುಸ್ತಕಗಳ ರಚನೆಯೂ ರಭಸದಿಂದ ಮುಂದುವರಿಯುವುದು. ಶಾಲೆಗಳಲ್ಲಿ ಮಕ್ಕಳ ಪುಸ್ತಕಭಂಡಾರವೂ ವಿಸ್ತಾರಗೊಳ್ಳುವುದು. ಅಷ್ಟರಲ್ಲಿ ಅದರ ಸವಿಯನ್ನುಂಡ ಮಕ್ಕಳು ಮನೆ ಸೇರಿ ಪ್ರಬುದ್ಧವಯಸ್ಕರಾಗುವರು. ಆ ಮೇಲೆ ಆಯಾ ಮನೆಗಳಿಂದ ಬರುವ ಮಕ್ಕಳ ಕೈಯ್ಯಲ್ಲಿ ಅವರಾಗಿ ಆತ್ಮಸಂತೋಷದಿಂದ ಲ್ಯಾಬ್ರೆರಿಫೀಸನ್ನು ಕೊಟ್ಟು ಕಳುಹಿಸುವರು. ಹೀಗೆ ಲ್ಯಾಬ್ರೆರಿಫೀಸನ್ನು ಕೊಡುವ ರೂಢಿಯೂ ಅದರ ಪ್ರಯೋಜನವೂ ಜನರಲ್ಲೊಮ್ಮೆ ನೆಲೆಯಾಗುವ ತನಕ ಉಪಾಧ್ಯಾಯರು ಕಷ್ಟಪಡಬೇಕಾಗಿದೆ; ದೂರೂ ಕೇಳಬೇಕಾದೀತು. ಇವೆರಡೂ ಉಪಾಧ್ಯಾಯ ವೃತ್ತಿಗೆ ಬಳುವಳಿಯಾಗಿ ಬಂದಿರುವಾಗ ಅವನ್ನು ಯೋಚಿಸಿ ಹಿಂಜರಿಯುವುದಲ್ಲ. ನಾಳಿನ ಕನ್ನಡಿಗರ ಹೆಸರಲ್ಲಿ ಟೊಂಕ ಕಟ್ಟಿ ಮುಂದಡಿ ಇಡುವುದೇ. ಕನ್ನಡ ವಾಗ್ದೇವಿಯ ಪಾದಾರವಿಂದದಲ್ಲಿ ಉಪಾಧ್ಯಾಯವೃಂದದಿಂದ ಸಲ್ಲಬೇಕಾಗಿರುವ ಕಾಣಿಕೆಯೆಂದರೆ ಅವರವರ ಶಾಲೆಗಳಲ್ಲಿ ಬಾಲವಾಙ್ಮಯಪುಸ್ತಕ ಭಂಡಾರಸ್ಥಾಪನೆ. ಅದರಿಂದಾಗಿ ನಾಳೆ ಕನ್ನಡನುಡಿಗೆ ಕನ್ನಡನಾಡಿಗೆ ಶ್ರೇಯಸ್ಸು. ಅಂತಾಗಲಿ!

